ಉಪನ್ಯಾಸ
ಗ್ರಂಥಮಾಲೆ

೧೫೩

# ಕೈಮಗ್ಗದ ಉದ್ದಿಮೆಯ ಅಭಿವೃದ್ಧಿ

ವ್ಹಿ. ಬಿ. ಅಂಗಡಿ



ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಮಾರ್ಚ, ೧೯೭೩

ಉಪನ್ಯಾಸ ಗ್ರಂಥಮಾಲೆ

೧೫೩

# ಕೈಮಗ್ಗದ ಉದ್ದಿಮೆಯ ಅಭಿವೃದ್ಧಿ

ವ್ಹಿ. ಬಿ. ಅಂಗಡಿ




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮಾರ್ಚ, ೧೯೭೩

ಪ್ರಕಾಶಕರು:
ಎಸ್. ಎಸ್. ಒಡೆಯರ, ಎಂ. ಎ., ಎಲ್‌ಎಲ್. ಬಿ
ಕುಲಸಚಿವರು,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ: ಮಾರ್ಚ, ೧೯೭೩
೫,೦೦೦ ಪ್ರತಿಗಳು



ಬೆಲೆ: ೨೫ ಪೈಸೆ

ಮುದ್ರಕರು:
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ,
ಧಾರವಾಡ-೩

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೧೫೨ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು-ನಾಲ್ಕು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಕಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯು ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೨೫-೨-೧೯೭೩

ಎ. ಎಸ್. ಅಡಕೆ
ಕುಲಪತಿಗಳು

# ಲೇಖಕರ ಮಾತು

ಸಮಗ್ರ ಐದು ವರ್ಷಗಳವರೆಗೆ ನೇಕಾರರ ಮಧ್ಯ ದಲ್ಲಿದ್ದು ಅವರು ಪಡುತ್ತಿರುವ ಕಷ್ಟಕಾರ್ಪಣ್ಯಗಳನ್ನು ಕಣ್ಣಾರೆ ಕಂಡು, ಅವರ ದುಃಸ್ಥಿತಿಯ ಕಾರಣಗಳನ್ನು ಕಂಡು-ಹಿಡಿವ ಬಲವಾದ ಕುತೂಹಲ ನನ್ನಲ್ಲಿ ಹುಟ್ಟಿಕೊಂಡಿತು. ಅದುವೇ ನೇಕಾರರು ಅವಲಂಬಿಸಿದ ಕೈಗಾರಿಕೆಯ ಸಂಶೋ-ಧನೆಗೆ ನನ್ನನ್ನು ಪ್ರೇರೇಪಿಸಿತು. ಅಲ್ಲಲ್ಲಿ ಕೆಲವು ಕೈಮಗ್ಗದ ಕೇಂದ್ರಗಳನ್ನು ಸಂದರ್ಶಿಸಿ, ಕೂಲಂಕಷ ಅಭ್ಯಾಸಮಾಡಿದ ಮೇಲೆ, ಈ ಉದ್ದಿಮೆಯ ಅಭಿವೃದ್ಧಿ ಸಮಸ್ಯೆ ಹಾಗೂ ಪರಿಹಾರ ಇವುಗಳ ಬಗೆಗೆ ಒಂದು ನಿರ್ಣಯಕ್ಕೆ ಬಂದೆ. ನನ್ನ ವಿಚಾರಗಳನ್ನು ಕೈಮಗ್ಗದ ಕೇಂದ್ರದಲ್ಲಿರುವ ನೇಕಾರರ ಮುಂದೆ ಮಂಡಿಸಿ ಅವರ ಅಭಿಪ್ರಾಯ ಪಡೆಯಬೇಕೆಂಬ ಹಂಬಲ ಹೆಚ್ಚಾಗುತ್ತಿದ್ದಂತೆಯೇ "ಕೈಮಗ್ಗದ ಉದ್ದಿಮೆಯ ಅಭಿವೃದ್ಧಿ" ಎಂಬ ವಿಷಯವನ್ನು ಕುರಿತು ಮಾತನಾಡಲು ನನ್ನನ್ನು ಆಮಂತ್ರಿಸಿ ನನ್ನ ವಿಚಾರಗಳನ್ನು ವ್ಯಕ್ತಪಡಿಸುವ ಸದಾವಕಾಶವನ್ನೊದಗಿಸಿ ಕೊಟ್ಟು ನಿರ್ದೇಶಕರಾದ ಮಾನ್ಯ ಶ್ರೀ ಚೆನ್ನವೀರ ಕಣವಿಯವರು ತುಂಬ ಉಪಕಾರ ಮಾಡಿದರು.

ಕೈಮಗ್ಗದ ಉದ್ದಿಮೆಯ ಪ್ರಸಿದ್ಧ ಕೇಂದ್ರವಾದ ಗುಳೇದಗುಡ್ಡದಲ್ಲಿ ಏರ್ಪಡಿಸಲಾಗಿದ್ದ ಕರ್ನಾಟಕ ವಿಶ್ವ ವಿದ್ಯಾಲಯದ ವ್ಯಾಸಂಗ ವಿಸ್ತರಣ ಶಿಬಿರದ ಆಶ್ರಯದಲ್ಲಿ ಮಾಡಿದ ಭಾಷಣದ ವಿಷಯವನ್ನು ವಿಸ್ತರಿಸಿ ಈ ಕಿರು ಹೊತ್ತಿಗೆಯ ರೂಪದಲ್ಲಿ ಪ್ರಕಟಿಸಲಾಗಿದೆ.

ಬಹು ಪುರಾತನ ಕಾಲದಿಂದಲೂ ಅನೇಕ ಏರಿಳಿತಗಳನ್ನು ಅನುಭವಿಸಿ, ಭಾರತದ ಕೆಲವು ಭಾಗಗಳಲ್ಲಿ ಈಗಾಗಲೇ ಅಳಿದು, ಇನ್ನೂ ಬಹು ಭಾಗಗಳಲ್ಲಿ ಉಳಿದುಕೊಂಡು ಬಂದಿರುವ ಕೈಮಗ್ಗದ ಉದ್ದಿಮೆಯನ್ನು ಅಭಿವೃದ್ಧಿಗೊಳಿಸಲು ಸರಕಾರ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಆ ಎಲ್ಲ ಕಾರ್ಯಕ್ರಮಗಳನ್ನೂ ಹಾಗೂ ಈ ಉದ್ದಿಮೆಯ ಪ್ರಸ್ತುತ ಸಮಸ್ಯೆಗಳನ್ನೂ ಪೂರ್ಣ ಚರ್ಚಿಸುವ ಅವಕಾಶ ಈ ಕಿರುಹೊತ್ತಿಗೆಯಲ್ಲಿ ಸಾಧ್ಯವಾಗದ್ದರಿಂದ ಅವುಗಳ ಸ್ಥೂಲ ಸ್ವರೂಪವನ್ನು ಚರ್ಚಿಸಿ, ಸೂಕ್ತ ಪರಿಹಾರಗಳನ್ನು ಸೂಚಿಸಲು ಪ್ರಯತ್ನಿಸಿದ್ದೇನೆ.

ಇಂಥ ವಾಸ್ತವಿಕ ವಿಷಯಗಳಲ್ಲಿ ನನ್ನ ಕುತೂಹಲ ಕೆರಳಿಸಲು ಕಾರಣರಾದ ಹಾಗೂ ಈ ಹೊತ್ತಿಗೆ ಹಸ್ತಪ್ರತಿ ರೂಪದಲ್ಲಿದ್ದಾಗ ಓದಿ ಸಮಯೋಚಿತ ಸಲಹೆ ಸೂಚನೆಗಳನ್ನು ಮಾಡಿದ ನನ್ನ ವಿದ್ಯಾಗುರುಗಳಾದ ಡಾ. ಟಿ. ಕೆ. ಮೇಟಿಯವರನ್ನು ಹಾಗೂ ನನ್ನ ಇನ್ನೊಬ್ಬ ವಿದ್ಯಾಗುರುಗಳಾದ ಡಾ. ಡಿ. ಎಮ್. ನಂಜುಂಡಪ್ಪನವರನ್ನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸದಿರಲಾರೆ. ಈ ಕಿರುಹೊತ್ತಿಗೆಯ ಪ್ರಕಟಣೆಯಲ್ಲಿ ಆಸ್ಥೆವಹಿಸಿದ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ನನ್ನ ಅಭಿನಂದನೆಗಳು.

ಸಂಕೇಶ್ವರ                ವ್ಹಿ. ಬಿ. ಅಂಗಡಿ

೫–೩–೧೯೭೩

# ಪರಿವಿಡಿ

# ೧. ಐತಿಹಾಸಿಕ ಹಿನ್ನೆಲೆ

ಹತ್ತಿಯನ್ನು ಉಪಯೋಗಿಸಿ ಬಟ್ಟೆಯನ್ನು ಉತ್ಪಾದಿಸಿದವರಲ್ಲಿ ಸಮಗ್ರ ಪ್ರಪಂಚದಲ್ಲಿ ಭಾರತೀಯರೇ ಮೊದಲಿಗರೆಂಬುವುದರಲ್ಲಿ ಇತಿಹಾಸಕಾರರಲ್ಲಿ ಯಾವ ಭಿನ್ನಾಭಿಪ್ರಾಯಗಳೂ ಕಂಡುಬರುವದಿಲ್ಲ. ಭಾರತದಲ್ಲಿ ಅರಿವೆಯ ತಯಾರಿಕೆ ಎಂದಿನಿಂದ ಆರಂಭವಾಯಿತು. ಎಂಬ ಅಂಶವನ್ನು ಗುರುತಿಸಲು ತಜ್ಞರ ಸಂಶೋಧನೆ ಇನ್ನೂ ನಡೆದಿದೆ. ಕ್ರಿ.ಶ.ಪೂ.೮೦೦ ವರ್ಷಗಳ ಹಿಂದೆಯೇ ಭಾರತೀಯರು ಹತ್ತಿಯ ವಸ್ತುಗಳ ಉತ್ಪಾದನೆಯಲ್ಲಿ ತೊಡಗಿದ್ದರೆಂಬುವುದಕ್ಕೆ ಸಾಕಷ್ಟು ಆಧಾರಗಳು ದೊರೆತಿವೆ. ಕ್ರಿ. ಶ.ಪೂ. ೧೫೦೦ ರಿಂದ ಕ್ರಿ.ಶ.೧೫೦೦ರ ವರೆಗೆ ಭಾರತವು ಹತ್ತಿಬಟ್ಟೆ ನೇಯುವ ಪ್ರಪಂಚದ ಒಂದೇ ಕೇಂದ್ರವಾಗಿತ್ತೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಇತ್ತೀಚೆಗೆ ದೊರೆತ ಕೆಲವು ಅವಶೇಷಗಳಿಂದ, ಕ್ರಿ. ಶ. ಪೂ. ೧೫೦೦ ವರ್ಷಗಳ ಪೂರ್ವದಲ್ಲಿಯೇ ಭಾರತ ಬಟ್ಟೆಯನ್ನು ಇಜಿಪ್ತ, ಬೆಬಿಲೋನಿಯ ಮೊದಲಾದ ವಿದೇಶಗಳಿಗೆ ರಫ್ತು ಮಾಡುತ್ತಿದ್ದಿತೆಂದು ವಿದಿತವಾಗುತ್ತಿದೆ. ಇಜಿಪ್ತದ ಪಿರ್‍ಯಾಮಿಡ್‌ಗಳಲ್ಲಿಯ ಗೋರಿಗಳಿಗೆ ಹೊದಿಸಿದ ಬಟ್ಟೆಗಳು ಭಾರತೀಯವೆಂದು ಕೆಲವು ಸಂಶೋಧನೆಯಿಂದ ಅಭಿಪ್ರಾಯವಾಗಿದೆ. ಭಾರತದ ಬಟ್ಟೆಗೆ ಬೆಬಿಲೋನಿಯಾದಲ್ಲಿ "ಸಿಂಧು" ಎಂದ

ಕರೆಯುತ್ತಿದ್ದರೆಂದು ಡಾ. ಸಾಯಿಸ್ ಅವರು ಕಂಡುಹಿಡಿದಿದ್ದಾರೆ. ಇಜಿಪ್ತದಲ್ಲಿ ಈ ಬಟ್ಟೆಗೆ "ಪಟ" ಎಂದು ಹೆಸರಿಸಿದ್ದರೆಂದು ಮತ್ತು ಭಾರತ ಮೊದಲಾದ ವಿದೇಶಗಳಿಗೆ ಹೇರಳವಾಗಿ ನಿರ್ಯಾತ ಮಾಡುತ್ತಿದ್ದರೆಂದು ಪಂಬಾನನಗೆಳೆಯರು ತಮ್ಮ ಸಂಶೋಧನೆಯಿಂದ ಸ್ಪಷ್ಟಪಡಿಸಿದ್ದಾರೆ. ಕರ್ನಾಟಕದಲ್ಲಿ ಉತ್ಪಾದಿಸಲ್ಪಟ್ಟ ಬಟ್ಟೆಗಳನ್ನು ಗ್ರೀಕ ದೇಶಕ್ಕೆ ನಿರ್ಯಾತ ಮಾಡಲಾಗುತ್ತಿತ್ತೆಂಬ ಅಂಶ ಇತ್ತೀಚಿತ್ತಲಾಗಿ ದೊರೆತ ಕೆಲವು ಮೂಲಗಳಿಂದ ಬೆಳಕಿಗೆ ಬಂದಿದೆ. ಗ್ರೀಕರಲ್ಲಿಯ ಕೆಲವು ಧಾರ್ಮಿಕ ಸಂಪ್ರದಾಯಗಳು ಕರ್ನಾಟಕದ ಸಂಪ್ರದಾಯಕ್ಕೆ ಸ್ಪಷ್ಟವಾಗಿ ಹೋಲುತ್ತವೆಂಬುದು ಹಾಗೂ ಗ್ರೀಕ ನಾಟಕವೊಂದರಲ್ಲಿ ಕನ್ನಡ ಶಬ್ದಗಳ ಬಳಕೆ, ಗ್ರೀಕ ಹಾಗೂ ಕರ್ನಾಟಕ ಇವುಗಳಲ್ಲಿ ವಾಣಿಜ್ಯ ಸಂಬಂಧ ಇರುವುದನ್ನು ಎತ್ತಿತೋರಿಸುತ್ತವೆ. ಪುರಾತನ ಕಾಲದಲ್ಲಿ ಎರಡೂ ದೇಶಗಳ ನಿಕಟ ಸಂಬಂಧ ಮುಖ್ಯವಾಗಿ ವಾಣಿಜ್ಯದ ಮುಖಾಂತರವೇ ಸ್ಥಾಪಿಸಲ್ಪಡುತ್ತಿತ್ತೆಂಬುದನ್ನು ಐತಿಹಾಸಿಕ ಆಧಾರಗಳ ಮೇಲಿಂದ ಪ್ರತಿಪಾದಿಸಬಹುದು. ಹಿಂದಿನ ಕಾಲದಲ್ಲಿ ವಿದೇಶಕ್ಕೆ ಕಳುಹಿಸುವ ಮುಖ್ಯ ವಸ್ತು ಬಟ್ಟೆಯೇ ಆಗಿತ್ತಾದ್ದರಿಂದ, ಕರ್ನಾಟಕದಲ್ಲಿಯೂ ಬಟ್ಟೆಯ ಉತ್ಪಾದನೆ ಬಹುಕಾಲದಿಂದ ಇತ್ತೆಂಬುದು ಗೋಚರವಾಗುತ್ತದೆ.

ಮೇಲಿನ ಅಂಶಗಳಿಂದ, ಭಾರತದಲ್ಲಿ ಕೈಮಗ್ಗದ ಉದ್ದಿಮೆ ಬಹುಪುರಾತನ ಕಾಲದಿಂದಲೂ ಅಸ್ತಿತ್ವದಲ್ಲಿದೆಯೆಂಬುದು ಸ್ಪಷ್ಟವಾಗುತ್ತದೆ. ಕೈಮಗ್ಗದ ಉದ್ದಿಮೆಯ ಅಭಿವೃದ್ಧಿ

ಯನ್ನು ಆರಂಭದಿಂದ ವಿವರಿಸುವದು ಐತಿಹಾಸಿಕ ಆಧಾರಗಳು ಸಾಕಷ್ಟು ದೊರೆಯದೇ ಇರುವುದರಿಂದ, ಅಸಾಧ್ಯವಾಗುತ್ತದೆ. ಆದ್ದರಿಂದ, ಸುಮಾರು ಎರಡು ಶತಮಾನಗಳ ಅಭಿವೃದ್ಧಿಯ ವಿವರಗಳನ್ನು ಇಲ್ಲಿ ಕೊಡಲಾಗಿದೆ.

ಭಾರತದ ಕೈಮಗ್ಗದ ಉದ್ದಿಮೆ ೧೯ನೇ ಶತಮಾನದ ಪೂರ್ವದಲ್ಲಿ ಇಂಗ್ಲೀಷ ಉತ್ಪಾದಕರಿಂದ ಹಾಗೂ ಆಂತರಿಕ ಆತಂಕಗಳಿಂದ ಅನೇಕ ತೊಂದರೆಗಳನ್ನೆದುರಿಸಬೇಕಾಗುತ್ತಿದ್ದರೂ ಪ್ರಪಂಚದ ಮಾರುಕಟ್ಟೆಯಲ್ಲಿ ತನ್ನ ಪ್ರಸಿದ್ಧಿಯನ್ನುಳಿಸಿಕೊಂಡಿತ್ತು. ದುರ್ದೈವದಿಂದ ೧೯ನೇ ಶತಮಾನದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ವಿವಿಧ ನಿರ್ಬಂಧನೆಗಳಿಂದಾಗಿ ಈ ಉದ್ದಿಮೆ ಕ್ಷೀಣವಾಗಹತ್ತಿತು. ಬಹು ಸಂಖ್ಯೆ ನೇಕಾರರು ವಂಶಪರಂಪರಾಗತವಾಗಿ ಬಂದ ನೇಕಾರಿಕೆಯನ್ನು ತೊರೆದು ಸರಕಾರಿ ನೌಕರಿ ಹಾಗೂ ಇನ್ನಿತರ ಉದ್ಯೋಗಗಳನ್ನು ಅವಲಂಬಿಸಬೇಕಾಯಿತು. ಪ್ರಸ್ತುತ ಶತಮಾನದಲ್ಲಿ ಗಿರಣಿ ನೂಲಿನ ಆಯಾತ ಹೆಚ್ಚಾದ್ದರಿಂದ ನೂಲು ತೆಗೆಯುವ ಉದ್ಯೋಗದಲ್ಲಿ ತೊಡಗಿದ ಎಷ್ಟೋ ಕುಟುಂಬಗಳು ತಮ್ಮ ಉದ್ಯೋಗವನ್ನು ಕಳೆದುಕೊಂಡವಲ್ಲದೆ, ಆದೇ ಉದ್ಯೋಗ ಸಮಸ್ಯೆ ಬೃಹದಾಕಾರವಾಗಿ ಹಬ್ಬಿತು. ಬಹುಸಂಖ್ಯೆ ಒಕ್ಕಲು ಕುಟುಂಬಗಳು ಈ ಉದ್ಯೋಗದ ಕುಸಿತದಿಂದಾಗಿ ಅರೆ ಉದ್ಯೋಗದಿಂದ ಬಳಲಹತ್ತಿದವು.

೧೮೫೪ರಲ್ಲಿ ನೂಲಿನ ಗಿರಣಿಯು ಭಾರತದಲ್ಲಿಯೇ ಸ್ಥಾಪಿಸಲ್ಪಟ್ಟಿತು. ಈ ಗಿರಣಿಗಳ ವಿಸ್ತರಣ ಕಾರ್ಯ

ಕ್ರಮಗಳು ೧೯ ಮತ್ತು ೨೦ ನೇ ಶತಮಾನಗಳಲ್ಲಿ ಸತತವಾಗಿ ಮುಂದುವರಿದುದರ ಪರಿಣಾಮವಾಗಿ ನೂಲಿನ ಆಯಾತ ಗಣನೀಯವಾಗಿ ಕಡಿಮೆಯಾಗಿ, ನೂಲಿನ ದರಗಳು ಇಳಿಯ ಹತ್ತಿದವು. ತತ್ಫಲವಾಗಿ ದೇಶದ ಎಲ್ಲಾ ಕೈಮಗ್ಗದ ಕೇಂದ್ರಗಳು ಸರ್ವಸಾಮಾನ್ಯವಾಗಿ ಗಿರಣಿಯ ನೂಲನ್ನೇ ಉಪಯೋಗಿಸಹತ್ತಿದವು. ಫ್ಯಾಕ್ಟ್ ಫಾಯಿಂಡಿಂಗ ಸಮಿತಿಯ ಅಂಕಿ ಅಂಶಗಳಂತೆ, ೧೮೯೫ರಿಂದ ಭಾರತದಲ್ಲಿ ನೂಲಿನ ಆಯಾತ ತೀವ್ರಗತಿಯಲ್ಲಿ ಇಳಿಯಹತ್ತಿತು. ನೂಲಿನ ಗಿರಣಿ ಹಾಗೂ ಕೈಮಗ್ಗದ ಉದ್ದಿಮೆಗಳಲ್ಲಿ ಪೈಪೋಟಿ ಇಲ್ಲದೆ ಅವುಗಳು ಒಂದಕ್ಕೊಂದು ಪೂರಕ ಉದ್ದಿಮೆಗಳಾಗಿ ಪರಿಣಮಿಸಿದ್ದರಿಂದ ನೂಲಿನ ಗಿರಣಿಗಳು ನಿರಾತಂಕವಾಗಿ ಬೆಳೆಯಹತ್ತಿದವು.

ನೇಯುವ ಗಿರಣಿಯು ೧೮೫೪ರಲ್ಲಿ ಭಾರತದಲ್ಲಿ ಮೊಟ್ಟ ಮೊದಲು ಸ್ಥಾಪಿಸಲ್ಪಟ್ಟಿತು. ಪ್ರಾರಂಭದಲ್ಲಿ ಗಿರಣಿಗಳ ಬೆಳವಣಿಗೆ ಮಂದಗತಿಯಲ್ಲಿದ್ದು ವಿದ್ಯುತ್ತಿನ ಉಪಯೋಗ ತಿಳಿದುಬಂದ ಮೇಲೆ ಬೆಳವಣಿಗೆ ಗಣನೀಯವಾಗಿ ಹೆಚ್ಚಾಯಿತು. ೧೮೯೬–೧೯೦೦ ರಲ್ಲಿ ಮಿಲ್ಲುಗಳು ೮೫ ದಶಲಕ್ಷ ಪೌಂಡುಗಳಷ್ಟು ನೂಲನ್ನು ಉಪಯೋಗಿಸುತ್ತಿದ್ದರೆ. ಕೈಮಗ್ಗದ ಕೇಂದ್ರಗಳು ೨೦೦ ದಶಲಕ್ಷ ಪೌಂಡು ನೂಲನ್ನು ಉಪಯೋಗಿಸುತ್ತಿದ್ದವು. ಈ ಅವಧಿಯಲ್ಲಿಯ ಗಿರಣಿ ನೂಲಿನ ನಿಯಮಿತ ಪೂರೈಕೆ ಹಾಗೂ ಅನುಕೂಲಕರವಾದ ಸರಕಾರದ ನೀತಿಗಳಿಂದಾಗಿ ಕೈಮಗ್ಗದ ಉದ್ದಿಮೆಗೆ

ಪ್ರೋತ್ಸಾಹ ಸಿಕ್ಕಂತಾಯಿತು. ಕಳೆದ ಶತಮಾನದ ಕಡೆಯ ವರ್ಷಗಳಲ್ಲಿ ಪ್ರಾರಂಭವಾದ ಸ್ವದೇಶಿ ಚಳವಳಿಯೂ ಈ ಉದ್ದಿಮೆಯ ಮೇಲೆ ಲಾಭಕರ ಪರಿಣಾಮ ಬೀರಿತು. ಇದೇ ಸಮಯಕ್ಕೆ ಶಟಲ್ ಮಗ್ಗಗಳೆಂದು ಪ್ರಸಿದ್ಧಿ ಪಡೆದ ಫ್ಲ್ಲಾಯ ಶಟಲ್ ಮಗ್ಗಗಳ ಸಂಶೋಧನೆಯಾಗಿ ನೇಕಾರನ ಉತ್ಪಾದನಾ ಸಾಮರ್ಥ್ಯ ಹೆಚ್ಚಿ ಅವನ ಆದಾಯದ ಮಟ್ಟ ಏರಿತು.

ಈ ಎಲ್ಲ ಅಂಶಗಳು ಕೈಮಗ್ಗದ ಉದ್ದಿಮೆಯ ಕುಗ್ಗು ವಿಕೆಯನ್ನು ಕಡಿಮೆಮಾಡಿದುವೇ ವಿನ: ಅದರ ಮೊದಲ ಸ್ಥಾನ ವನ್ನು ದೊರಕಿಸಿಕೊಡಲು ಸಮರ್ಥವಾಗಲಿಲ್ಲ. ವಿಮಂಚನೆಯ ಸಂಗತಿಯೆಂದರೆ, ೧೯ ನೇ ಶತಮಾನದ ಅಂತ್ಯದಲ್ಲಿ ಭಾರತ ಬಟ್ಟೆಗಳನ್ನು ನಿರ್ಯಾತಮಾಡುವ ಬದಲು ಆಯಾತ ಮಾಡಿಕೊಳ್ಳುವ ಮುಖ್ಯ ದೇಶವಾಗಿ ಪರಿಣಮಿಸಿತು. ಈ ವರ್ಷಗಳಲ್ಲಿ ಮೇಲಿಂದ ಮೇಲೆ ಸಂಭವಿಸಿದ ಭಯಂಕರ ಬರಗಾಲಗಳಿಂದಾಗಿ ಉಂಟಾಗುವ ನಿರುದ್ಯೋಗದ ಜ್ವಲಂತ ಸಮಸ್ಯೆ ಸರಕಾರದ ಲಕ್ಷ್ಯವನ್ನು ಸೆಳೆಯಿತು. ಬರಗಾಲದ ರಾಯಲ್ ಕಮೀಶನ್ (೧೮೮೦) ಈ ಪರಿಸ್ಥಿತಿಯನ್ನು ಕೂಲಂಕಷವಾಗಿ ಅಭ್ಯಾಸಮಾಡಿ ಮಹತ್ವದ ಶಿಫಾರಸು ಗಳನ್ನು ಮಾಡಿತು. ಕುಟೀರ ಉದ್ದಿಮೆಗಳ ಶ್ರಮಿಕರಿಗೆ ತಮ್ಮ ಉದ್ಯೋಗದಲ್ಲಿಯೇ ಪೂರ್ಣ ಹಾಗೂ ಲಾಭದಾಯಕ ಉದ್ಯೋಗ ದೊರೆಯುವಂತಹ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದರೆ, ಶ್ರಮಿಕರ ಕುಶಲತೆ ನಶಿಸಿಹೋಗುವ ಸಂಭವ ಕಡಿಮೆಯಾಗಿ, ಭವಿಷ್ಯತ್ತಿನಲ್ಲಿ ಗುಡಿಸಲು ಕೈಗಾರಿಕೆಗಳನ್ನು

ಅಭಿವೃದ್ಧಿಗೊಳಿಸುವ ಕಾರ್ಯ ಸುಲಭವಾಗುತ್ತದೆಂದು ಕಮೀಶನ್ ಅಭಿಪ್ರಾಯ ಪಟ್ಟಿತು. ಮುಂದೆ ೧೮೮೪, ೧೮೯೮ ಮತ್ತು ೧೯೦೧ ಈ ವರ್ಷಗಳಲ್ಲಿ ಸರಕಾರದಿಂದ ಸ್ಥಾಪಿಸಲ್ಪಟ್ಟ ಎಲ್ಲ ಕಮೀಶನ್‌ಗಳು ಸ್ವಲ್ಪ ಹೆಚ್ಚು ಕಡಿಮೆ ಇದೇ ಅಭಿಪ್ರಾಯವನ್ನು ವ್ಯಕ್ತಮಾಡಿವೆ. ಆಗಿನ ಪ್ರಾಂತೀಯ ಸರಕಾರಗಳು ಅರ್ಧ ಮನಸ್ಸಿನಿಂದಲೇ ಈ ಶಿಫಾರಸುಗಳನ್ನು ಒಪ್ಪಿಕೊಂಡು, ನೇಕಾರಿಕೋದ್ಯಮದ ಅಭಿವೃದ್ಧಿ ಕಾರ್ಯ ಕ್ರಮಗಳನ್ನು ಹಮ್ಮಿಕೊಂಡವು.

ಇಪ್ಪತ್ತನೆಯ ಶತಮಾನದ ಆರಂಭದಿಂದ ಭಾರತದಲ್ಲಿ ಗಿರಣಿರಂಗದ ಬೆಳವಣಿಗೆ ತ್ವರಿತಗತಿಯಲ್ಲಿ ಹೆಚ್ಚಿ ಕೈಮಗ್ಗದ ಉದ್ದಿಮೆಗೆ ಕೊಡಲಿಪೆಟ್ಟು ಬಿದ್ದಿತೆಂಬುದು ಕೆಳಗಿನ ಅಂಕಿ ಅಂಶಗಳಿಂದ ವೇದ್ಯವಾಗುತ್ತದೆ. ೧೯೦೧–೧೯೧೪ ಈ ಕಾಲದಲ್ಲಿ ಗಿರಣಿಗಳ ಬಟ್ಟೆಯ ಒಟ್ಟು ಉತ್ಪಾದನೆ ೫೯೩ ದಶಲಕ್ಷ ಮೀಟರ ಇದ್ದರೆ, ಕೈಮಗ್ಗದ ಬಟ್ಟೆಯ ಉತ್ಪಾದನೆ ೯೦೬ ದಶಲಕ್ಷ ಮೀಟರ ಇದ್ದು, ಈ ಅವಧಿಯಲ್ಲಿ ಮಿಲ್ಲಿನ ಉತ್ಪಾದನೆ ಶೇಕಡಾ ೭೫ ರಷ್ಟು ಹೆಚ್ಚಾದರೆ ಕೈಮಗ್ಗದ ರಂಗದಲ್ಲಿಯ ಉತ್ಪಾದನೆ ಶೇಕಡಾ ೧೭ ರಂತೆ ಹೆಚ್ಚಾಗಿದ್ದುದು ಕಂಡು ಬರುತ್ತದೆ. ೧೯೦೯–೧೦–೧೯೧೩–೧೪ ಈ ಅವಧಿಯಲ್ಲಿ ೪೫೨.೩ ದಶಲಕ್ಷ ರೂಪಾಯಿಗಳ ಮೊತ್ತದ ಹತ್ತಿಬಟ್ಟೆಗಳ ಆಯಾತಮಾಡಿಕೊಳ್ಳಲ್ಪಟ್ಟಿದ್ದರೆ ೨೨.೭ ದಶಲಕ್ಷ ರೂಪಾಯಿಗಳ ಮೊತ್ತದ ಬಟ್ಟೆಗಳ ನಿರ್ಯಾತವಾಗಿರುತ್ತಿತ್ತು. ೧೯೭೬ ರಲ್ಲಿ ಒಂದು ಮಗ್ಗಕ್ಕೆ ೧೨೦ ಸ್ಪಿಂಡಲಗಳಿದ್ದು ಈ ಸಂಖ್ಯೆ

೧೧೪, ೧೦೦, ಹಾಗೂ ೫೯ ಕ್ಕೆ ಅನುಕ್ರಮವಾಗಿ ೧೯೯೬, ೧೯೦೬ ಹಾಗೂ ೧೯೧೬ ರಲ್ಲಿ ಇಳಿಯಿತು. ತತ್ಪರಿಣಾಮವಾಗಿ ಕೈಮಗ್ಗಗಳ ಕೇಂದ್ರಗಳಿಗೆ ಪೂರೈಸುವ ನೂಲಿನಲ್ಲಿ ಕೊರತೆಯುಂಟಾಗಿ ಕೈಮಗ್ಗದ ಉತ್ಪಾದನೆ ಕುಸಿಯುಹತ್ತಿತು. ಆದರೆ ಗಿರಣಿಯು ಉತ್ಪಾದನೆ ಕುದುರ ಹತ್ತಿತು. ನೂಲನ್ನು ಆಯಾತ ಮಾಡಿಕೊಳ್ಳಲು ಯಾವ ನಿರ್ಬಂಧನೆಗಳು ಇಲ್ಲದಿದ್ದರೂ ಕೈಮಗ್ಗದ ಉದ್ದಿಮೆಗಳ ಅಸಮರ್ಥತೆಯಿಂದಾಗಿ ಅದು ಅಸಾಧ್ಯವಾಯಿತು. ಹೀಗಾಗಿ ಕೈಮಗ್ಗದ ಉದ್ದಿಮೆ ಭಾರಿ ಪೆಟ್ಟನ್ನು ಅನುಭವಿಸಬೇಕಾಯಿತು.

೧೯೧೧ ರಲ್ಲಿ ಪ್ರತಿ ೧೦,೦೦೦ ಜನಸಂಖ್ಯೆಗೆ ೧೨.೩ ಜನ ಗಿರಣಿಗಳಲ್ಲಿ ಉದ್ಯೋಗ ಪಡೆದಿದ್ದರೆ, ಕೈಮಗ್ಗದ ಉದ್ದಿಮೆಯಲ್ಲಿ ೧೨೧.೭ ವ್ಯಕ್ತಿಗಳು ಉದ್ಯೋಗ ದೊರಕಿಸಿಕೊಂಡಿದ್ದರು. ಕೈಮಗ್ಗದ ಬಟ್ಟೆಯು ಉತ್ಪಾದನೆ ತೀವ್ರಗತಿಯಲ್ಲಿ ಇಳಿಯುತ್ತಿದ್ದರೆ ಗಿರಣಿಯು ಬಟ್ಟೆಯು ಉತ್ಪಾದನೆ ಶರವೇಗದಲ್ಲಿ ಬೆಳೆಯುಹತ್ತಿತೆಂಬುದು ಕೆಳಗಿನ ಕೋಷ್ಟಕದಿಂದ ಸ್ಪಷ್ಟವಾಗುತ್ತದೆ.

### ಕೋಷ್ಟಕ ೧

ಗಿರಣಿ ಮತ್ತು ಕೈಮಗ್ಗ ಕ್ಷೇತ್ರಗಳ ಹತ್ತಿ ಬಟ್ಟೆಗೆ ಸಂಬಂಧಿಸಿದ ಉತ್ಪಾದನೆಯು ಒಲವು.

| ವರ್ಷಗಳು | ಗಿರಣಿ ಉತ್ಪಾದನೆ ದಶಲಕ್ಷ ಗಜಗಳಲ್ಲಿ | ಕೈಮಗ್ಗದ ಉತ್ಪಾದನೆ ದಶಲಕ್ಷ ಗಜಗಳಲ್ಲಿ |
|---|---|---|
| ೧ | ೨ | ೩ |
| ೧೯೦೧-೦೨<br>೧೯೦೫-೦೬ | ೫೯೩ | ೯೦೬ |
| ೧೯೧೪ | ೧,೧೦೫ | ೧,೧೮೬ |
| ೧೯೨೧-೨೨ | ೧,೮೦೫ | ೧,೧೪೦ |
| ೧೯೨೪-೨೫ | ೧,೮೭೫ | ೧,೫೦೨ |
| ೧೯೨೫-೨೬ | ೨,೦೬೭ | ೯೪೮ |
| ೧೯೨೯-೩೦ | ೨,೪೧೯ | ೧,೪೦೬ |
| ೧೯೩೦-೩೧ | ೨,೪೬೦ | ೧,೩೯೦ |
| ೧೯೩೧-೩೨ | ೩,೧೬೧.೨ | ೧,೫೨೨.೩ |
| ೧೯೩೨-೩೩ | ೩,೨೮೨.೨ | ೧,೭೩೫.೭ |
| ೧೯೩೩-೩೪ | ೩,೦೪೫.೫ | ೧,೪೪೧.೮ |
| ೧೯೩೪-೩೫ | ೩,೪೫೦.೬ | ೧,೪೩೪.೫ |
| ೧೯೩೫-೩೬ | ೩,೫೬೬.೩ | ೧,೬೫೭.೧ |
| ೧೯೩೬-೩೭ | ೩ ೬೫೫.೭ | ೧,೪೪೫.೫ |
| ೧೯೩೭-೩೮ | ೪,೦೨೯.೨ | ೧,೪೭೭.೦ |
| ೧೯೩೮-೩೯ | ೪.೨೯೭.೪ | ೧,೯೪೫.೯ |
| ೧೯೩೯-೪೦ | ೩,೭೯೦ | ೧,೮೨೦ |
| ೧೯೪೧-೪೨ | ೩,೭೨೦ | ೧,೬೨೦ |
| ೧೯೪೨-೪೩ | ೩,೨೯೦ | ೧,೫೦೦ |

| ೧ | ೨ | ೩ |
|---|---|---|
| ೧೯೪೩-೪೪ | ೪,೪೧೦ | ೧,೬೦೦ |
| ೧೯೪೪-೪೫ | ೪,೩೦೦ | ೧,೫೦೦ |
| ೧೯೪೮ | ೪,೩೧೯ | ೧,೨೫೯ |
| ೧೯೪೯ | ೩,೯೦೪ | ೧,೪೧೮ |
| ೧೯೫೦ | ೩,೬೬೫ | ೯೫೩ |
| ೧೯೫೧ | ೪,೦೭೬ | ೧,೦೦೭ |
| ೧೯೫೨ | ೪,೫೯೯ | ೧,೩೧೩ |
| ೧೯೫೩ | ೪,೮೭೯ | ೧,೪೨೧ |

ಈ ಕಾಲದಲ್ಲಿ ಮದ್ರಾಸ, ಪಂಜಾಬ, ಬಂಗಾಲ, ಮಧ್ಯಪ್ರದೇಶ, ಸಂಯುಕ್ತಪ್ರಾಂತ ಮತ್ತು ಮುಂಬೈ ಪ್ರಾಂತದ ಸರಕಾರಗಳು ನೇಕಾರರ ಕ್ಷೇಮದ ಸಲುವಾಗಿ ಹೆಚ್ಚಿನ ಲಕ್ಷವನ್ನು ಕೊಟ್ಟವು. ಇಲ್ಲಿಯು ಸುಧಾರಣಾ ಕ್ರಮಗಳಲ್ಲಿ ಸುಧಾರಿಸಿದ ಮಗ್ಗಗಳ ಹಾಗೂ ಇತರ ಸಲಕರಣೆಗಳ ಮಾಹಿತಿಯನ್ನು ನೇಕಾರರಿಗೆ ಮಾಡಿಕೊಡುವುದು, ಅವುಗಳ ಪ್ರಚಾರ, ಸ್ಥಳದಿಂದ ಸ್ಥಳಕ್ಕೆ ಸಂಚರಿಸಿ ಅನುಭವವನ್ನು ನೀಡುವುದು, ತರಜೇತಿ ಕೇಂದ್ರಗಳನ್ನು ಸ್ಥಾಪಿಸುವುದು ಇವೆ ಮೊದಲಾದುವುಗಳು ಮುಖ್ಯವಾದುವು. ಈ ತರಬೇತಿ

ಮೂಲ: Adopted from Kedarnath Prasad. Technological choice under-developed planning:

ಕೇಂದ್ರಗಳನ್ನು ಪ್ರಾರಂಭಿಸಲು ಪ್ರಾಂತೀಯ ಸರಕಾರಗಳು ಸಹಾಯಧನವನ್ನು ಕೊಡುತ್ತಿದ್ದವು. ಸುಧಾರಿಸಿದ ಕೆಲವು ಕೇಂದ್ರಗಳಲ್ಲಿ ಸಹಕಾರಿ ಸಂಘಗಳನ್ನು ಸ್ಥಾಪಿಸಿ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿಸಲು ಪ್ರೋತ್ಸಾಹಿಸಲಾಯಿತು.

ಮೊದಲನೆ ಮಹಾಯುದ್ಧವು ಭಾರತದ ಕೈಮಗ್ಗದ ಉದ್ದಿಮೆಯ ಬೆಳವಣಿಗೆಗೆ ಭಾರಿ ಆತಂಕವನ್ನೊಡ್ಡಿತು. ಮಹಾಯುದ್ಧದಿಂದಾಗಿ ನಿರ್ಯಾತ ವ್ಯಾಪಾರ ಪೂರ್ಣ ಕುಸಿಯಿತು. ಇಲ್ಲಿಯ ಗಿರಣಿಗಳು ಅಂತರಿಕ ಮಾರುಕಟ್ಟೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನಮಾಡಹತ್ತಿದವು. ಇದು ಸುಲಭವಾಗಿಯೇ ಕೈಗೂಡಿತು. ಗಿರಣಿರಂಗದ ಉತ್ಪಾದನೆಯಲ್ಲಿಯೂ ಹೆಚ್ಚಳ ಕಂಡುಬಂದಿತು. ನೂಲಿನ ಆಯಾತ ವ್ಯಾಪಾರ ಪೂರ್ಣ ನಿಂತುಹೋಯಿತು. ದೇಶದಲ್ಲಿ ಉತ್ಪಾದಿಸಲ್ಪಟ್ಟ ಒಟ್ಟುನೂಲಿನಲ್ಲಿ ಹೆಚ್ಚಿನ ಪ್ರಮಾಣವನ್ನು ಗಿರಣಿರಂಗವೇ ಉಪಯೋಗಿಸಹತ್ತಿತು. ತತ್ಫಲವಾಗಿ ಕೈಮಗ್ಗದ ಉದ್ದಿಮೆಗೆ ನೂಲಿನ ಪೂರೈಕೆ ತೃಪ್ತಿಕರವಾಗಿರಲಿಲ್ಲ. ಈ ಉದ್ದಿಮೆ ನೂಲಿನ ಭಾರಿ ಕೊರತೆಯನ್ನು ಅನುಭವಿಸಬೇಕಾಯಿತು. ೧೯೧೧-೧೨ ರಿಂದ ೧೯೧೫-೧೬ ಈ ಅವಧಿಯಲ್ಲಿ ಪ್ರತಿವರ್ಷ ಸರಾಸರಿ ೨೫೯.೪ ದಶಲಕ್ಷ ಪೌಂಡು ನೂಲನ್ನು ಗಿರಣಿರಂಗ ಉಪಯೋಗಿಸುತ್ತಿದ್ದರೆ. ಕೈಮಗ್ಗದ ರಂಗ ಈ ಅವಧಿಯಲ್ಲಿ ೨೪೯.೬ ದಶಲಕ್ಷ ಪೌಂಡು ನೂಲನ್ನು ಉಪಯೋಗಿಸುತ್ತಿತ್ತು. ಆದರೆ ೧೯೧೬-೧೭ ರಿಂದ ೧೯೨೦-೨೧ ಈ ಅವಧಿಯಲ್ಲಿ ಗಿರಣಿಗಳ ನೂಲಿನ ಉಪಯೋಗ ಪ್ರತಿ-ವರ್ಷದ

ಸರಾಸರಿ ೩.೩೨.೮ ದಶಲಕ್ಷಕ್ಕೆ ಏರಿದರೆ ಕೈಮಗ್ಗದ ಉದ್ದಿಮೆಯು ಸರಾಸರಿ ೨೧೯.೪ ದಶಲಕ್ಷಕ್ಕೆ ಇಳಿಯಿತು. ತತ್ಪರಿಣಾಮವಾಗಿ ಉದ್ದಿಮೆ ಕ್ರಮೇಣ ಕುಗ್ಗಹತ್ತಿತು.

ವಿವಿಧ ಬಣ್ಣಗಳ ಆಯಾತ ಕಡಿಮೆಯಾಗಿ ಹಾಗೂ ನೂಲಿನ ಭಾರಿ ಕೊರತೆಯಿಂದಾಗಿ ಇವುಗಳ ಬೆಲೆಗಳು ಮಿತಿ ಮೀರಿ ಹೆಚ್ಚಿದವು. ಗುಡಿ ಕೈಗಾರಿಕೆಯ ಕೇಂದ್ರಗಳು ತತ್ತರಿಸಹತ್ತಿದವು. "ರೋಖಡಾ" (ಸ್ವತಂತ್ರ) ನೇಕಾರರು ಬಂಡವಾಳದ ಕೊರತೆಯಿಂದಾಗಿ ತಮ್ಮ ಉದ್ಯೋಗವನ್ನು ಸ್ವತಂತ್ರವಾಗಿ ನಡೆಸಿಕೊಂಡು ಹೋಗುವುದು ಅಸಾಧ್ಯವಾಯಿತು. ಹೀಗಾಗಿ ರೋಖಡಾ ಪದ್ಧತಿಯೇ ಕುಸಿದು ಬೀಳಹತ್ತಿತು. ಈ ವ್ಯವಸ್ಥೆಯಲ್ಲಿದ್ದ ನೇಕಾರರು ಸಾವುಕಾರಿ ಇಲ್ಲವೆ ಕಾರಖಾನಾ ವ್ಯವಸ್ಥೆಯಲ್ಲಿ ಸೇರಿಕೊಳ್ಳಹತ್ತಿದರು. ಈ ಅವಧಿಯಲ್ಲಿ ಸಾಹುಕಾರಿ ಅಥವಾ ಕಾರಖಾನಾ ವ್ಯವಸ್ಥೆಗಳು ಎಲ್ಲ ಕೈಗಾರಿಕಾ ಕೇಂದ್ರಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಬೆಳೆದು ಬಂದವು. ಒಟ್ಟು ಈ ಕಾಲಕ್ಕೆ ಕೈಮಗ್ಗ ಹಾಗೂ ಗಿರಣಿ ರಂಗಗಳಲ್ಲಿ ಬಹು ದೊಡ್ಡ ನೇರ ಸ್ಪರ್ಧೆ ಪ್ರಾರಂಭವಾಯಿತು.

"ಭಾರತದ ಇಂಡಸ್ಟ್ರಿಯಲ್ ಕಮೀಶನ್ನಿ"ನ ವರದಿಯ ಪ್ರಕಾರ ೧೯೧೮ರ ವೇಳೆಗೆ ಕೈನೂಲಿನ ಉದ್ಯೋಗ ಸಂಪೂರ್ಣವಾಗಿ ಮಾಯವಾಯಿತು. ಆದರೆ ಕೈಮಗ್ಗದ ಉದ್ಯೋಗ ಮಾತ್ರ ತನ್ನ ಮಹತ್ವವನ್ನುಳಿಸಿಕೊಂಡಿತು. ಈ ಸಮಯಕ್ಕಾಗಲೇ ದಪ್ಪ ಬಟ್ಟೆಯ ನೇಯ್ಗೆ ಕಡಿಮೆಯಾಗಿ ಮಧ್ಯಮ ಹಾಗೂ ಜಿನುಗು ನೂಲಿನಿಂದ ತೆಳ್ಳನೆ ಬಟ್ಟೆಯನ್ನು ಕೈಮಗ್ಗ

ಗಳ ಕೇಂದ್ರಗಳು ನೇಯ್ಯುಹತ್ತಿದವು. ಕೈಮಗ್ಗದ ಬೆಳವಣಿಗೆಗೆ ಪ್ರಾಂತೀಯ ಸರಕಾರಗಳು ಹೆಚ್ಚಿನ ಗಮನ ಕೊಟ್ಟವು. ಸುಧಾರಿಸಿದ ಉತ್ಪಾದನಾ ಪದ್ಧತಿಗಳನ್ನು ಪ್ರಚಾರಮಾಡುವುದು, ತರಬೇತಿ ಕೇಂದ್ರಗಳನ್ನು ಮುಖ್ಯ ಕೈಮಗ್ಗದ ಕೇಂದ್ರಗಳಲ್ಲಿ ಸ್ಥಾಪಿಸುವುದು, ವಾಹನಗಳ ಸಹಾಯದಿಂದ ವಿವಿಧ ಕೇಂದ್ರಗಳಿಗೆ ಸಂದರ್ಶಿಸಿ ನೇಕಾರರಿಗೆ ತರಬೇತಿ ಕೊಡುವುದು, ಸಹಕಾರಿ ಸಂಘಗಳನ್ನು ಸಂಘಟಿಸಲು ಸಹಾಯ ಮಾಡುವುದು, ಸಂಶೋಧನಾ ಕೇಂದ್ರಗಳನ್ನು ತೆರೆದು ಹೊಸ ಹೊಸ ಸಂಶೋಧನೆಗಳನ್ನು ನೇಕಾರರಿಗೆ ತಿಳಿಸುವುದು, ಪರಿಣಿತರನ್ನು ವಿದೇಶಗಳಿಗೆ ಕಳುಹಿಸಿ ಅಲ್ಲಿಯ ಮಾರುಕಟ್ಟೆಯಲ್ಲಿ ಕೈಮಗ್ಗದ ಸರಕುಗಳನ್ನು ಪ್ರಚಾರ ಮಾಡುವುದು, ನೇಕಾರರಿಗೆ ಸಾಲದ ಮೇಲೆ. ಕಡಿಮೆ ದರದಲ್ಲಿ ಹಾಗೂ ರಿಯಾಯತಿ ದರದಲ್ಲಿ ಮಗ್ಗ ಇನ್ನಿತರ ಸುಧಾರಿಸಿದ ಸಲಕರಣೆಗಳನ್ನೊದಗಿಸುವುದು ಮೊದಲಾದ ಕಾರ್ಯಕ್ರಮಗಳನ್ನು ಪ್ರಾಂತೀಯ ಸರಕಾರಗಳು ಕೈಗೆತ್ತಿಕೊಂಡವು. ಇದರಿಂದಾಗಿ ಕೆಲವು ಕೇಂದ್ರಗಳ ಅಭಿವೃದ್ಧಿಗೆ ತುಂಬ ಸಹಾಯವಾಯಿತು.

ಮೊದಲನೆ ಮಹಾಯುದ್ಧ ಮುಗಿದ ಮೇಲೆ ನೂಲಿನ ಪೂರೈಕೆಯಲ್ಲಿ ಹೆಚ್ಚಳವಾದುದರಿಂದ ಕೈಮಗ್ಗದ ಉದ್ದಿಮೆ ಸ್ವಲ್ಪ ಸುಧಾರಿಸಿಕೊಂಡಿತು. ೧೯೩೪–೨೫ ರಲ್ಲಿ ನೂಲಿನ ಉತ್ಪಾದನೆ ೧೫೬೨ ದಶಲಕ್ಷ ಪೌಂಡುಗಳಷ್ಟು ಹೆಚ್ಚಿತಾದರೂ ೧೯೨೭ ರಿಂದ ಈ ಉತ್ಪಾದನೆಯಲ್ಲಿ ಯಾವ ಹೆಚ್ಚಳವೂ

ಕಂಡುಬರಲಿಲ್ಲ. ಸಾದಾ ವಸ್ತ್ರಗಳನ್ನು (Plain Cloth) ನೇಯುತ್ತಿದ್ದ ಕೈಮಗ್ಗದ ಕೇಂದ್ರಗಳು ಗಿರಣಿಗಳ ಭಾರಿ ಪೈಪೋಟಿಯನ್ನು ಎದುರಿಸಬೇಕಾಯಿತು. ೧೯೨೭ರ ಮೊದಲು ಸೀರೆ-ಖಣ ಮೊದಲಾದ ಸ್ತ್ರೀಯರ ಉಡುಗೆಗಳನ್ನು ಕೈಮಗ್ಗದ ಕೇಂದ್ರಗಳೇ ಉತ್ಪಾದಿಸುತ್ತಿದ್ದವು. ಆದರೆ ಪ್ರಸ್ತುತ ವರ್ಷದಿಂದ ಗಿರಣಿಗಳೂ ಈ ವಸ್ತ್ರಗಳ ಉತ್ಪಾದನೆಯಲ್ಲಿ ತೊಡಗಿದವು. ಗಿರಣಿರಂಗದಲ್ಲಿ ಮಗ್ಗಗಳ ಸಂಖ್ಯೆಯೂ ಏರಿತು. ಈ ಎಲ್ಲ ಕಾರಣಗಳಿಂದ ಕೈಮಗ್ಗದ ಉದ್ದಿಮೆ ಮತ್ತು ಗಿರಣಿರಂಗಗಳಲ್ಲಿ ತೀವ್ರ ಸ್ಪರ್ಧೆ ಏರ್ಪಟ್ಟಿತು.

೧೯೩೫ ರ ನಂತರ ಕಿತ್ತುಹಾಕಿದ ಕಾಟನ್ ಎಕ್ಸಾಯಿಜ್ ಡ್ಯೂಟಿ, ಬಟ್ಟೆಯ ನಿರ್ಯಾತದ ಮೇಲೆ ಹೇರಿದ ಹೆಚ್ಚಿನ ಟ್ಯಾರಿಫ್, ವಿದೇಶಿ ನೂಲಿನ ಉಪಯೋಗವನ್ನು ಬಹಿಷ್ಕರಿಸಿದ್ದು ಈ ಮೊದಲಾದ ಕ್ರಮಗಳು ದೇಶದಲ್ಲಿ ಜಿನುಗು ವಸ್ತ್ರದ ಉತ್ಪಾದನೆಯ ಹೆಚ್ಚಳಕ್ಕೆ ಕಾರಣಗಳಾದವು. ಇದು ಕೈಮಗ್ಗದ ಉದ್ದಿಮೆಗೆ ಕುಠಾರಪ್ರಾಯವಾಗಿ ಪರಿಣಮಿಸಿತು. ಈ ಹೊತ್ತಿಗಾಗಲೇ ದೇಶದಲ್ಲಿ ಸಾಕಷ್ಟು ಅಭಿವೃದ್ಧಿ ಹೊಂದಿದ ಸಂಪರ್ಕಸಾಧನೆಯ ವ್ಯವಸ್ಥೆ ಗಿರಣಿಯ ಬಟ್ಟೆಯನ್ನು ಎಲ್ಲಗ್ರಾಮಾಂತರ ಪ್ರದೇಶಗಳಿಗೆ ಕಳುಹಿಸಲು ಅನುಕೂಲವಾಯಿತು. ಸ್ತ್ರೀಯರ ಉಡುಗೆಗಳ ಅಭಿರುಚಿಯಲ್ಲಿ ಸಾಕಷ್ಟು ಬದಲಾವಣೆಗಳಾಗಿದ್ದು, ಗಿರಣಿಯಲ್ಲಿ ತಯಾರಾದ ಪ್ಲೇನ್ ಸೀರೆಗಳನ್ನು ಹೆಚ್ಚು ಜನ ಸ್ತ್ರೀಯರು ಧರಿಸಲು ಪ್ರಾರಂಭಿಸಿದರು. ಕೈಮಗ್ಗದಲ್ಲಿ ತಯಾರಾದ

ನಕ್ಷೆಯ ಹಾಗೂ ರಬ್ಬು ಬಣ್ಣದ ಸೀರೆಗಳನ್ನುಡುವ ಬಹು ದಿನದ ಸಾಂಪ್ರದಾಯ ಮಾಯವಾಗಹತ್ತಿತು. ಇದೇ ಸಮಯಕ್ಕೆ ಅನೇಕ ಸಣ್ಣ ಪಾವರಲೂಮ್ ಕಾರಖಾನೆಗಳು ಕೈಮಗ್ಗದ ಕೇಂದ್ರಗಳಲ್ಲಿ ಸ್ಥಾಪಿಸಲ್ಪಟ್ಟವು. ಈ ಕಾರಖಾನೆ ಗಳಲ್ಲಿ ಬಣ್ಣದ ಸೀರೆಗಳು ಉತ್ಪಾದಿಸಲ್ಪಟ್ಟು ಅವುಗಳ ಮಾರಾಟವನ್ನು ಕೈಮಗ್ಗದ ಮಾರುಕಟ್ಟೆಯಲ್ಲಿ ಪ್ರಾರಂಭಿಸ ಲಾಯಿತು. ಕಳೆದ ಶತಮಾನದಲ್ಲಿ ವಿದೇಶಿ, ಸ್ವದೇಶಿ ಗಿರಣಿ ರಂಗಗಳ ಹಾಗೂ ಕೈಮಗ್ಗದ ಉದ್ದಿಮೆಗಳ ತ್ರಿವಿಧ ಪೈಪೋಟಿ ಇದ್ದರೆ, ಪ್ರಸ್ತುತ ಶತಮಾನದಲ್ಲಿ ಪಾವರಲೂಂ ಗಳ ಸ್ಥಾಪನೆಯಿಂದಾಗಿ ಚತುರ್ವಿಧ ಸ್ಪರ್ಧೆ ಏರ್ಪಟ್ಟಿತು. ತತ್ಫಲವಾಗಿ ಕೈಮಗ್ಗದ ಉದ್ದಿಮೆ ಕ್ಷೀಣವಾಯಿತು.

೧೯೧೯ರಿಂದ ಗುಡಿ ಕೈಗಾರಿಕೆಗಳಿಗೆ ಸಂಬಂಧಿಸಿದ ಸರಕಾರದ ಮನೋವೃತ್ತಿಯಲ್ಲಿ ನಿರ್ದಿಷ್ಟ ಬದಲಾವಣೆಯಾಯಿತು. ೧೯೨೧ ಮತ್ತು ೧೯೨೨ ರಲ್ಲಿ ಕೇಂದ್ರ ಸರಕಾರ ಎಲ್ಲಾ ಪ್ರಾಂತ ಸರಕಾರಗಳ ಉದ್ಯೋಗಗಳ ನಿರ್ದೇಶಕರ ಮಹಾ ಸಭೆಯನ್ನು ಕರೆಯಿತು. ಇದರ ಮೂಲ ಉದ್ದೇಶ ಎಲ್ಲಾ ಪ್ರಾಂತಗಳ ಉದ್ದಿಮೆಗಳ ಅಭಿವೃದ್ಧಿ ಚಟುವಟಿಕೆಗಳನ್ನು ಒಂದುಗೂಡಿಸಿ ಸಮಗ್ರ ಔದ್ಯೋಗಿಕ ನೀತಿಯನ್ನು ನಿರೂಪಿ ಸುವುದಾಗಿತ್ತು. ಕೈಮಗ್ಗದ ಉದ್ದಿಮೆಗಳನ್ನೊಳಗೊಂಡು ಕೆಲವು ಗುಡಿಸಲು ಕೈಗಾರಿಕೆಗಳಿಗೆ ಧನಸಹಾಯ ಸಲ್ಲಿಸುವ ಉದ್ದೇಶವನ್ನು ಪ್ರಾಂತೀಯ ಸರಕಾರಗಳು ಪಾಸುಮಾಡಿ ದವು. ಸುಧಾರಿಸಿದ ಸಲಕರಣೆಗಳನ್ನು ಪೂರೈಸುವ ಕಾರ್ಯ ಕ್ರಮಗಳನ್ನು ತ್ವರಿತಗೊಳಿಸಲಾಯಿತು. ದುರ್ದೈವದಿಂದ

ಈ ಎಲ್ಲ ಪ್ರಯತ್ನಗಳು ನಿರೀಕ್ಷಿಸಿದ ಫಲ ನೀಡಲಿಲ್ಲ. ಮುಂದೆ ಮುಗ್ಗಟ್ಟಿನ (depression) ಸ್ಥಿತಿ ನಿರ್ಮಾಣವಾಗಿ ನಿರುದ್ಯೋಗ ಸಮಸ್ಯೆ ಬೃಹದಾಕಾರವಾಗಿ ಹಬ್ಬಿತು.

೧೯೩೦ ರ ಮಹಾ ಮುಗ್ಗಟ್ಟಿನ ಸ್ಥಿತಿಯಿಂದಾಗಿ ಇಡೀ ಪ್ರಪಂಚದ ಆದರಂತೆ ಭಾರತದ ಕೃಷಿ ಹಾಗೂ ಕೈಗಾರಿಕೆ ರಂಗಗಳಲ್ಲಿಯ ಉತ್ಪಾದನೆ ಗಣನೀಯವಾಗಿ ಇಳಿದು, ಜನರ ಆದಾಯ ಕಡಿಮೆಯಾದುದರಿಂದ ಕೈಮಗ್ಗದ ಬಟ್ಟೆಗಳ ಬೇಡಿಕೆ ಕುಗ್ಗಿ ಕೈಮಗ್ಗದ ಉದ್ದಿಮೆ ದುರ್ಭರ ಪ್ರಸಂಗ ವನ್ನೆದುರಿಸಬೇಕಾಯಿತು. ಬಹುಸಂಖ್ಯೆ ನೇಕಾರ ಕುಟುಂಬ ಗಳು ತೀವ್ರ ಕಷ್ಟಕ್ಕೀಡಾದವು. ಈ ಗಂಭೀರ ಪರಿಸ್ಥಿತಿಯನ್ನೆ ದುರಿಸಲು, ಬ್ಯಾಂಕಿಂಗ ಎನ್‌ಕ್ವಾಯರಿ ಸಮಿತಿಯನ್ನು ಕುಟಿರ ಕೈಗಾರಿಕೆಯ ಅಭಿವೃದ್ಧಿಯ ಬಗೆಗೆ ನಿರ್ದಿಷ್ಟ ಹಾಗೂ ಶಾಶ್ವತ ಸಲಹೆಗಳನ್ನು ಮಾಡಲು ಭಾರತ ಸರಕಾರ ಕೇಳಿಕೊಂಡಿತು. ಈ ಸಮಿತಿಯ ಸಿಫಾರಸಿನಂತೆ,ಸರ ಕಾರ ಒಂದು ಪೈಸೆ ಡ್ಯೂಟಿಯನ್ನು ಒಂದು ಪೌಂಡು ಆಯಾತ ಮಾಡಿಕೊಂಡ ನೂಲಿನ ಮೇಲೆ ಹಾಕುವದರಿಂದ ಬರುವ ಆದಾಯವನ್ನು ಕೈಮಗ್ಗದ ಉದ್ದಿಮೆಯ ಅಭಿ ವೃದ್ಧಿಗೆ ಕೊಡಬೇಕೆಂದು ನಿರ್ಣಯಿಸಲಾಯಿತು. ಈ ನಿಧಿ ಯನ್ನು ಉಪಯೋಗಿಸಲು ಪ್ರಾಂತೀಯ ಸರಕಾರಗಳು ಕೆಲವು ಯೋಜನೆಗಳನ್ನು ರೂಪಿಸಿದವು. ನಂತರ ಎರಡನೆಯ ಮಹಾಯುದ್ಧ ಪ್ರಾರಂಭವಾಯಿತು.

ದ್ವಿತೀಯ ಮಹಾಯುದ್ಧವು ಪ್ರಥಮ ಮಹಾಯುದ್ಧದಂತೆ ಸ್ವಲ್ಪವಾದರೂ ಅನುಕೂಲ ಪರಿಸ್ಥಿತಿಯನ್ನು ಕೈಮಗ್ಗದ ಉದ್ದಿಮೆಗೆ ನಿರ್ಮಾಣಮಾಡಲಿಲ್ಲ. ಮೊದಲನೆ ಮಹಾಯುದ್ಧ ಪ್ರಾರಂಭವಾದಾಗ ಬಾರತದಲ್ಲಿಯ ಗಿರಣಿಗಳು ಸಾಕಷ್ಟು ಅಭಿವೃದ್ಧಿ ಹೊಂದಿರಲಿಲ್ಲವಾದ್ದರಿಂದ ಯುದ್ಧದಿಂದ ಹೆಚ್ಚಾದ ಬಟ್ಟೆಯ ಬೇಡಿಕೆಯನ್ನು ಈ ರಂಗ ಪೂರೈಸಲು ಅಸಮರ್ಥವಾಯಿತು. ಈ ಸ್ಥಿತಿಯಲ್ಲಿ ಕೈಮಗ್ಗದ ವಸ್ತುಗಳಿಗೆ ಹೆಚ್ಚಿನ ಬೇಡಿಕೆ ಬಂದು ಉದ್ದಿಮೆ ಹೆಚ್ಚಿನ ತೊಂದರೆಗಳನ್ನೆದುರಿಸಲಿಲ್ಲ. ಅಲ್ಲದೆ ಜಪಾನದಿಂದ ಸ್ವಲ್ಪಮಟ್ಟಿಗೆ ಕಚ್ಚಾಮಾಲಿನ ಪೂರೈಕೆಯೂ ಆಗುತ್ತಿತ್ತು. ಆದರೆ ಎರಡನೆ ಮಹಾಯುದ್ಧ ಪ್ರಾರಂಭವಾದ ಮೇಲೆ ನೂಲಿನ, ರೇಷ್ಮೆಯ ಹಾಗೂ ಬಣ್ಣಗಳ ಆಯಾತ ಸಂಪೂರ್ಣ ನಿಂತು ಕಚ್ಚಾ ಮಾಲಿನ ಭಾರಿ ಕೊರತೆ ನಿರ್ಮಾಣವಾಯಿತು. ದೇಶದಲ್ಲಿ ಬೃಹದಾಕಾರವಾಗಿ ಬೆಳೆದ ಗಿರಣಿರಂಗ ಇಲ್ಲಿ ಉತ್ಪಾದಿಸಲ್ಪಟ್ಟ ನೂಲಿನ ಬಹುಭಾಗವನ್ನು ಉಪಯೋಗಿಸಹತ್ತಿದ್ದರಿಂದ ಹಿಂದೆಂದೂ ಕಾಣದ ನೂಲಿನ ಹಾಗೂ ಇನ್ನಿತರ ಕಚ್ಚಾ ಮಾಲಿನ ಕೊರತೆಯನ್ನು ಕೈಮಗ್ಗದ ಉದ್ದಿಮೆ ಅನುಭವಿಸ ಹತ್ತಿತು.

ಈ ಪರಿಸ್ಥಿತಿಯನ್ನು ಗಮನಿಸಿ ಸರಕಾರ ಫ್ಯಾಕ್ಟ ಫಾಯಿಂಡಿಂಗ ಸಮಿತಿಯನ್ನು ೧೯೪೧ರಲ್ಲಿ ನೇಮಿಸಿತು. ಈ ಸಮಿತಿ ೧೯೪೨ ರಲ್ಲಿ ತನ್ನ ವರದಿಯನ್ನು ಸಲ್ಲಿಸಿ ಕೆಲವು ಮಹತ್ವದ ಅಂಶಗಳನ್ನು ಬೆಳಕಿಗೆ ತಂದಿತು. ಈ ವರದಿಯ

ಪ್ರಕಾರ ದೇಶದಲ್ಲಿ ಒಟ್ಟು ೨.೪ ದಶಲಕ್ಷ ಜನ ನೇಕಾರರಿದ್ದು ಇನ್ನುಳಿದ ಸಹಾಯಕ ನೇಕಾರರು ೩.೬ ದಶಲಕ್ಷ ಜನರು ಇದ್ದರೆಂದು ತಿಳಿದು ಬರುತ್ತದೆ. ಈ ನೇಕಾರರನ್ನು ಅವಲಂಬಿಸಿದ ಇತರೆ ಕುಟುಂಬಗಳ ಸಂಖ್ಯೆ ೪ ದಶಲಕ್ಷವೆಂದು ಗೊತ್ತಾಗುತ್ತದೆ. ಹೀಗೆ ಒಟ್ಟು ೧೦ ದಶಲಕ್ಷ ಜನ ನೇಕಾರರು ಈ ಉದ್ದಿಮೆಯನ್ನು ಅವಲಂಬಿಸಿದ್ದಾರೆಂದು ಈ ವರದಿಯಲ್ಲಿ ಲೆಕ್ಕಾಚಾರ ಮಾಡಲಾಗಿದೆ. ೧೯೪೨–೪೬ ರ ಅವಧಿಯಲ್ಲಿ ಕೈಮಗ್ಗದ ಉದ್ದಿಮೆಯ ಉತ್ಪಾದನೆಯಲ್ಲಿ ಸುಧಾರಣೆಯು ಪ್ರಾಂತೀಯ ಸರಕಾರಗಳು ಹಮ್ಮಿಕೊಂಡ ಅಭಿವೃದ್ಧಿ ಕಾರ್ಯಕ್ರಮಗಳಿಂದ ಸಾಧ್ಯವಾಯಿತು. ಆದರೂ ಕೈಮಗ್ಗದ ಅಭಿವೃದ್ಧಿ ಸಮಸ್ಯೆಗೆ ಶಾಶ್ವತ ಪರಿಹಾರ ದೊರೆಯದಿದ್ದುದನ್ನು ಇಲ್ಲಿ ಗಮನಿಸಬಹುದಾಗಿದೆ. ಇದರ ಮೂಲಕಾರಣವನ್ನು ಬರಗಾಲ ವಿಚಾರಣಾ ಸಮಿತಿ ಕಂಡುಹಿಡಿದು ಈ ರೀತಿ ಅಭಿಪ್ರಾಯಪಡುತ್ತಿದೆ. ಅಭಿವೃದ್ಧಿಗೆ ಬೇಕಾಗುವ ಜ್ಞಾನಕ್ಕೆ ಇಲ್ಲವೆ ಮನಸ್ಸಿಗೆ ಕೊರತೆ ಇಲ್ಲ. ಆದರೆ ಬಹುದೊಡ್ಡ ಆತಂಕವೆಂದರೆ, ಸರಕಾರದ ಎಲ್ಲ ಸೌಕರ್ಯಗಳನ್ನು ಹಾಗೂ ಅನುಕೂಲತೆಗಳನ್ನೊದಗಿಸುವ ಕರ್ತೃತ್ವ ಬೆರಳ ಮೇಲೆಣಿಸುವಷ್ಟು ಕೇಂದ್ರಗಳಲ್ಲಿ ಸಹಕಾರಿ ಚಳವಳಿ ಈ ದಿಶೆಯಲ್ಲಿ ಸ್ವಲ್ಪ ಪ್ರಗತಿಯನ್ನು ಸಾಧಿಸಿದೆ. ಆದರೆ ಇದರ ದಕ್ಷತೆಯನ್ನು ಪ್ರಶ್ನಿಸಬಹುದಾಗಿದೆ.

ನಮ್ಮದೇಶ ಸ್ವಾತಂತ್ರ್ಯಗಳಿಸಿದ ಮೇಲೆಯೂ ಕೈಮಗ್ಗದ ಉದ್ದಿಮೆಯ ಸಮಸ್ಯೆಗಳನ್ನು ಸಂಪೂರ್ಣವಾಗಿ

ನಿವಾರಿಸಿಲ್ಲ. ೧೯೪೭–೫೧ರ ಈ ಅವಧಿಯಲ್ಲಿ ಉದ್ದಿಮೆ ಅನೇಕ ತೊಂದರೆಗಳನ್ನು ಎದುರಿಸುವ ಪ್ರಸಂಗಗಳು ಬಂದೊದಗಿದವು. ದೇಶದಲ್ಲಿಯ ಬೆಲೆಗಳ ಅತಿ ಪ್ರಸರಣ ದಿಂದಾಗಿ ನೂಲಿನ ಹಾಗೂ ಬಟ್ಟೆಯ ಬೆಲೆಗಳು ಏರಹತ್ತಿದವು. ತತ್ಫಲವಾಗಿ ಬೇಡಿಕೆ ಗಣನೀಯವಾಗಿ ಇಳಿಯಿತು. ನೂಲಿನ ಬೆಲೆ ಗಗನಕ್ಕೇರಿದಾಗ ಹಾಗೂ ಬಟ್ಟೆಯ ಬೇಡಿಕೆ ಕುಸಿಯುತ್ತಿದ್ದಾಗ, ಯುದ್ಧಕಾಲಕ್ಕಿದ್ದ ನಿಯಂತ್ರಣವನ್ನು ೧೯೪೭ ರಲ್ಲಿ ತೆಗೆದುಹಾಕಲಾಯಿತಾದ್ದರಿಂದ ಬೆಲೆಗಳ ಏರಿಕೆ ಮತ್ತಷ್ಟು ಹೆಚ್ಚಾಗಿ ಬೇಡಿಕೆ ತೀವ್ರಗತಿಯಲ್ಲಿ ಕುಗ್ಗಹತ್ತಿತು. ನಿರುದ್ಯೋಗ ಹಾಗೂ ಅರೆ ಉದ್ಯೋಗ ಸಮಸ್ಯೆಗಳು ಈ ಉದ್ದಿಮೆಯಲ್ಲಿ ತಲೆದೋರಿದವು. ಗಿರಣಿ ಹಾಗೂ ಪಾವರ ಲೂಮ್ ರಂಗಗಳ ಉತ್ಪಾದನೆ ಹೆಚ್ಚಾಗಿ ಪೈಪೋಟಿಯೂ ಹೆಚ್ಚಿತು. ಈ ಎಲ್ಲ ಸಮಸ್ಯೆಗಳಿಗೆ ಸರಿಯಾದ ಪರಿಹಾರ ಸೂಚಿಸಲು ಹಾಗೂ ಎಲ್ಲ ರಂಗಗಳ ವಿವರವಾದ ಅಭ್ಯಾಸ ಮಾಡಲು ಖ್ಯಾತ ತಜ್ಞ ಶ್ರೀ ಕಾನುಂಗೊ ಅವರ ನೇತೃತ್ವದಲ್ಲಿ ನವ್ಹೆಂಬರ ೧೯೫೨ ರಲ್ಲಿ "ಟೆಕ್ಸ್ಟಾಯಿಲ್ ಇನ್‌ಕ್ವಾಯರಿ ಸಮಿತಿ"ಯನ್ನು ನೇಮಿಸಲಾಯಿತು.

ಇತ್ತೀಚಿನ ವರ್ಷಗಳಲ್ಲಿ ಕೈಮಗ್ಗದ ಉದ್ದಿಮೆಯು ಅಭಿವೃದ್ಧಿ ನಿರೀಕ್ಷಿಸಿದಷ್ಟು ಆಗಿಲ್ಲ. ಇದರ ಸಮಸ್ಯೆಗಳೂ ಶಾಶ್ವತವಾಗಿ ಪರಿಹಾರವಾಗಿಲ್ಲ. ಸುಮಾರು ೩ ಕೋಟಿ ಜನರು ಈ ಉದ್ದಿಮೆಯನ್ನು ಅವಲಂಬಿಸಿದ್ದಾರೆ. ಇಂದಿಗೂ ಈ ಉದ್ದಿಮೆ ಉತ್ಪಾದನೆ ಮತ್ತು ಉದ್ಯೋಗಾವಕಾಶಗಳ ದೃಷ್ಟಿಯಿಂದ ಬಹು ಮುಖ್ಯ ಪಾತ್ರವಹಿಸುತ್ತದೆ. ನೇಕಾರರ

ಆದಾಯದಲ್ಲಿ ಹೇಳಿಕೊಳ್ಳುವಂತಹ ಸುಧಾರಣೆಯಾಗಿಲ್ಲ. ಆದರೆ ಗಿರಣಿಯಲ್ಲಿಯ ಕೂಲಿಕಾರರ ಆದಾಯ ಸುಧಾರಿಸ ಹತ್ತಿದೆ. ಕೈಮಗ್ಗದ ಕೇಂದ್ರಗಳಲ್ಲಿಯ ಕೂಲಿಕಾರರ ಆದಾಯ ಬಹುದಿನಗಳಿಂದಲೂ ಸ್ಥಗಿತವಾಗಿದೆ. ಗಿರಣಿಯಲ್ಲಿಯ ಶ್ರಮಿಕರ ಉತ್ಪಾದನೆಯಲ್ಲಿ ಹೆಚ್ಚಳವಾಗಿದ್ದರಿಂದ ಅವರ ಆದಾಯದಲ್ಲಿ ಹೆಚ್ಚಿನ ಬದಲಾವಣೆಗಳಾಗಿಲ್ಲ. ನೇಕಾರನ ಪ್ರತಿತಿಂಗಳ ಆದಾಯ ಸುಗ್ಗಿಯ ಕಾಲಕ್ಕೆ ೪೫ರೂ.ಗಳಿಂದ ೬೦ರೂಪಾಯಿಗಳಷ್ಟಾದರೆ, ಮುಂದಗಾಲದಲ್ಲಿ ಅದು ೩೦ರಿಂದ ೨೦ರೂಪಾಯಿಗಳಷ್ಟಾಗುತ್ತದೆ. ಕೆಲವು ಕೇಂದ್ರಗಳಲ್ಲಿ ನೇಕಾರರ ಸ್ಥಿತಿ ಕೃಷಿ ಕಾರ್ಮಿಕರಿಗಿಂತಲೂ ಕನಿಷ್ಠವಾಗಿದೆ. ಆದ್ದರಿಂದ ಎಷ್ಟೋ ಜನ ನೇಕಾರರು ವಂಶಪರಂಪರೆಯಿಂದ ಬಂದ ಉದ್ಯೋಗವನ್ನು ತ್ಯಜಿಸಿ, ಇನ್ನಿತರ ಉದ್ಯೋಗಗಳನ್ನು ಅವಲಂಬಿಸಿದ್ದಾರೆ.

ಉತ್ಪಾದನೆ ಹಾಗೂ ಆದಾಯದ ದೃಷ್ಟಿಯಿಂದ ಕೈಮಗ್ಗದ ಉದ್ದಿಮೆಯನ್ನು ಗಿರಣಿಯ ರಂಗಕ್ಕೆ ಹೋಲಿಸಿದಾಗ ಕೈಮಗ್ಗದ ಉದ್ದಿಮೆ ಕ್ಷೀಣವಾದದ್ದು ಕಂಡುಬರುವುದೇನೊ ನಿಜ. ಆದರೆ ಇದರಿಂದ ಕೈಮಗ್ಗದ ಉದ್ದಿಮೆ ಸತ್ತಂತಹದು ಇಲ್ಲವೆ ಸಾಯುವಂತಹದೆಂದು ತರ್ಕಿಸಿದರೆ ತಪ್ಪಾದೀತು. ಆದರೆ ಇದು ಜೀವಂತ ಉದ್ದಿಮೆಯಾಗಿದ್ದು ಭವಿಷ್ಯತ್ತಿನಲ್ಲಿಯೂ ಬದುಕಿ ಉಳಿಯುವ ಉದ್ದಿಮೆಯಾಗಿದೆಯೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ ಬಹುದಿನಗಳಿಂದ

ಗಿರಣಿ ಹಾಗೂ ಪಾವರಲೂಮ್ ರಂಗಗಳೊಂದಿಗೆ ಸ್ಪರ್ಧೆ ನಡೆಸುತ್ತ ಬಂದಿರುವ ಈ ಉದ್ದಿಮೆ ಮುಂದೆಯೂ ಬದುಕಿ ಉಳಿಯುತ್ತದೆ ಎಂಬುದಕ್ಕೆ ಸಾಕಷ್ಟು ಆಧಾರಗಳು ಹಾಗೂ ಅಂಶಗಳು ದೊರೆಯುತ್ತವೆಯೆಂದರೆ ಉತ್ಪ್ರೇಕ್ಷೆಯು ಮಾತಾಗದು.

## ೨. ಸರಕಾರದ ಧೋರಣೆ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳು

ಭಾರತದಲ್ಲಿ ನೂಲಿನ ಹಾಗೂ ಬಟ್ಟೆಯ ಗಿರಣಿಗಳ ಸ್ಥಾಪನೆಯಾದಂದಿನಿಂದ ಸರಕಾರ ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಯ ಬಗೆಗೆ ವಿಚಾರಿಸಹತ್ತಿತು; ಅದರಲ್ಲೂ ಗಿರಣಿಗಳ ತೀಕ್ಷ್ಣ ಸ್ಪರ್ಧೆ ಆರಂಭವಾದಂದಿನಿಂದ ಈ ಸಮಸ್ಯೆಯತ್ತ ಸರಕಾರ ತೀವ್ರಗಮನ ಕೊಟ್ಟಿತು. ಆದರೂ ಈ ಶತಮಾನದ ಮೂವತ್ತು ಹಾಗೂ- ನಾಲ್ವತ್ತರಲ್ಲಿಯ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಸರಕಾರದ ಧೋರಣೆ ಭಾಗಶಃವಾಗಿದ್ದಂತೆ ತೋರುತ್ತದೆ.

"ಅಖಿಲ ಭಾರತ ನೇಕಾರ ಮಂಡಲಿ" [All India Handloom Board] ಸ್ಥಾಪಿಸಲ್ಪಟ್ಟಂದಿನಿಂದಲೇ ಶಾಶ್ವತ ಹಾಗೂ ದೂರದರ್ಶಿ ಕ್ರಮಗಳನ್ನು ಹಮ್ಮಿಕೊಂಡು ಈ ಉದ್ದಿಮೆಯನ್ನು ಭದ್ರ ತಳಹದಿಯ ಮೇಲೆ ಅಭಿವೃದ್ಧಿಪಡಿಸುವ ಪ್ರಯತ್ನಗಳು ಪ್ರಾರಂಭವಾಗಿರುತ್ತವೆ.

ಈ ಉದ್ದಿಮೆಯ ಸಂಘಟನೆಯ ಸುಧಾರಣೆಯ ದೃಷ್ಟಿಯಿಂದ ನೇಕಾರರ ಸಹಕಾರಿ ಸಂಘಗಳನ್ನು ರೂಪಿಸಲು ಪ್ರೋತ್ಸಾಹಿಸಲಾಗುತ್ತಿತ್ತು. ೧೯೦೪ ರಲ್ಲಿ ಸಹಕಾರಿ ಸಂಘಗಳ ಕಾಯ್ದೆಯನ್ನು ಪಾಸು ಮಾಡಿದ ಮೇಲೆ, ನೇಕಾರರನ್ನು ಸಹಕಾರಿ ರಂಗದ ಕಕ್ಷೆಯಲ್ಲಿ ತರುವ ಪ್ರಯತ್ನಗಳು ನಡೆದವು.

ಪ್ರಾರಂಭದಲ್ಲಿ ಸ್ವಲ್ಪ ಪ್ರಗತಿ ಕಂಡುಬಂದರೂ, ತದನಂತರ ನಿರೀಕ್ಷಿಸಿದಷ್ಟು ಪ್ರಗತಿಯಾಗಲಿಲ್ಲ. ಈ ಸಹಕಾರಿ ಸಂಘಗಳ ಉದ್ದೇಶ ಪರಿಮಿತವಾಗಿತ್ತಾದ್ದರಿಂದ ಸಾಕಷ್ಟು ಪ್ರಗತಿಗೆ ಸಹಾಯಕವಾಗಲಿಲ್ಲ. ಗಿರಣಿ ರಂಗ ವಿಸ್ತಾರವಾದಂತೆ ಕೈಮಗ್ಗದ ಉದ್ದಿಮೆಯ ವಿವಿಧ ಅಂಗಗಳ ಅಭಿವೃದ್ಧಿಯ ಸಮಸ್ಯೆ ಉಲ್ಬಣಗೊಂಡಿತು. ದೇಶದ ವಿವಿಧ ಭಾಗಗಳಲ್ಲಿ ನೇಕಾರರ ಚಳವಳಿಗಳು ಪ್ರಾರಂಭವಾದುದರ ಪ್ರಯುಕ್ತ ಕೇಂದ್ರ ಸರಕಾರ ಸಹಾಯಕ ಕ್ರಮಗಳನ್ನು ಜಾರಿಯಲ್ಲಿ ತಂದಿತು. ಈ ಕ್ರಮದ ಫಲವಾಗಿ ಪ್ರತಿ ಪ್ರಾಂತೀಯ ಸರಕಾರಕ್ಕೆ ಪ್ರತಿವರ್ಷ ೫ ಲಕ್ಷ ರೂಪಾಯಿಗಳ ಸಹಾಯ ಧನವನ್ನು ಕೊಡಮಾಡಲಾಯಿತು. ಈ ಸಹಾಯಧನಕ್ಕೆ ಪ್ರಾಂತೀಯ ಸರಕಾರಗಳು ತಮ್ಮ ಸಂಪನ್ಮೂಲಗಳನ್ನು ಕೂಡಿಸಿ ಅನೇಕ ಅಭಿವೃದ್ಧಿ ಕ್ರಮಗಳನ್ನು ಕೈಗೆತ್ತಿ ಕೊಂಡವು. ಮುಂದೆ ಈ ಕ್ರಮವನ್ನು ಕೈಬಿಡಲಾಯಿತು.

ಮೇಲಿಂದ ಮೇಲೆ ಉದ್ಭವಿಸುವ ನೇಕಾರರ ಸಂಕಷ್ಟಗಳನ್ನು ಗಮನಿಸಿ ೧೯೪೧ರಲ್ಲಿ ಮೂರು ಜನ ಸದಸ್ಯರನ್ನೊಳಗೊಂಡ ಫ್ಯಾಕ್ಟ್ ಫಾಯಿಂಡಿಂಗ ಸಮಿತಿಯನ್ನು ಸರಕಾರ ರಚಿಸಿತು. ಈ ಸಮಿತಿ ಸಮಸ್ಯೆಯನ್ನು ವ್ಯಾಪಕವಾಗಿ ಅಭ್ಯಸಿಸಿ, ಮಾರಾಟ ಸಂಘಟನೆಯ ಪೈಪೋಟಿಯ ಸ್ವರೂಪ ಮತ್ತು ವ್ಯಾಪಕತೆ ಯನ್ನೊಳಗೊಂಡ ಸಮಗ್ರ ವರದಿಯನ್ನೊಪ್ಪಿಸಿತು. ಈ ಸಮಿತಿಯ ಶಿಫಾರಸಿನ ಮೇರೆಗೆ ಮೊದಲನೆ ಅಖಿಲ ಭಾರತ

ನೇಕಾರರ ಕೈಮಗ್ಗ ಮಂಡಳಿಯನ್ನು ೧೯೪೫ರಲ್ಲಿ ಸ್ಥಾಪಿಸಲಾಯಿತು. ಇದರ ಮುಖ್ಯ ಕಾರ್ಯಕ್ರಮಗಳು ಇಂತಿವೆ.

೧) ಕಚ್ಚಾಮಾಲುಗಳನ್ನು ಯೋಗ್ಯದರಕ್ಕೆ ಪೂರೈಸುವುದು ಮತ್ತು ಕೈಮಗ್ಗದ ವಸ್ತುಗಳ ಮಾರಾಟದ ವ್ಯವಸ್ಥೆಯನ್ನು ಮಾಡುವುದು.

೨) ಆರ್ಥಿಕ ಮತ್ತು ಔದ್ಯೋಗಿಕ ಸಮಸ್ಯೆಗಳ ಸಂಶೋಧನೆ ಮಾಡುವುದು.

ಅಖಿಲ ಭಾರತ ನೇಕಾರರ ಮಂಡಲಿ ಎರಡು ಸಮಿತಿಗಳನ್ನು ನೇಮಿಸಿತು ೧) ಕಚ್ಚಾಮಾಲಿನ ಸಮಿತಿ ೨) ಮಾರಾಟದ ಮತ್ತು ಸಂಶೋಧನ ಸಮಿತಿ. ಈ ಸಮಿತಿಗಳು ಕಚ್ಚಾಮಾಲಿನ ಪೂರೈಕೆಯ ಹಾಗೂ ಸಂಶೋಧನೆ ಮತ್ತು ಮಾರಾಟದ ವಿಷಯಗಳಲ್ಲಿ ಮಂಡಳಿಗೆ ಸಲಹೆ ಮಾಡುತ್ತಿದ್ದವು.

ಕಚ್ಚಾ ಮಾಲುಗಳ ಪೂರೈಕೆಯನ್ನು ಹೆಚ್ಚಿಸುವ ಉದ್ದೇಶದಿಂದ, ಯುದ್ಧದ ನಂತರದ ಯೋಜನೆಯಲ್ಲಿ ಸ್ಥಾಪಿಸಲ್ಪಟ್ಟ ಒಟ್ಟು ಕದರುಗಳಲ್ಲಿ ಶೇಕಡಾ ೫೦ ಕದರುಗಳನ್ನು ಕೈಮಗ್ಗದ ಉದ್ದಿಮೆಗೆ ತೆಗೆದಿರಿಸಬೇಕೆಂದು ಮಂಡಳಿ ಶಿಫಾರಸುಮಾಡಿತು. ಈ ಸಲಹೆಯನ್ನು ಭಾರತ ಸರಕಾರ ತಾತ್ವಿಕವಾಗಿ ಒಪ್ಪಿಕೊಂಡಿದ್ದರೂ, ಶೇಕಡಾ ೨೫ ಕದರುಗಳನ್ನು ಮಾತ್ರ ತೆಗೆದಿರಿಸಿತು. ಪ್ರಾಂತೀಯ ಸರಕಾರಗಳಿಗೆ ಈ ಪ್ರಮಾಣವನ್ನು ಏರಿಸುವ ಅಧಿಕಾರವನ್ನು

ಕೊಡಮಾಡಲಾಯಿತು. ಮಂಡಳಿಯು ಸೂಚನೆಯಂತೆ ಸಹಕಾರಿ ಸಂಘಗಳಿಗೆ ಸಾಕಷ್ಟು ಕಚ್ಚಾ ಮಾಲುಗಳನ್ನು ಯೋಗ್ಯ ಬೆಲೆಗಳಿಗೆ ಪೂರೈಸುವ ವ್ಯವಸ್ಥೆಯನ್ನು ಭಾರತ ಸರಕಾರ ಮಾಡಿತು. ೧೯೪೭ ರ ನಂತರ ಈ ಮಂಡಳಿ ತನ್ನ ಕಾರ್ಯಗಳಿಂದ ನಿರ್ಗಮಿಸಿತು. ೧೯೪೯ರ ವರೆಗೆ ಸರಕಾರ ಯಾವ ಕ್ರಮಗಳನ್ನೂ ತೆಗೆದುಕೊಳ್ಳಲಿಲ್ಲ. ೧೯೪೯ ರಲ್ಲಿ "ಕೈಮಗ್ಗದ ಅಭಿವೃದ್ಧಿ ನಿಧಿ"ಯನ್ನು ಮೊದಲು ೧೦ ಲಕ್ಷ ರೂಪಾಯಿಗಳಿಂದ ಪ್ರಾರಂಭಿಸಿ ನಂತರ ೫ ಲಕ್ಷ ರೂಪಾಯಿ ಗಳನ್ನು ಅದಕ್ಕೆ ಕೂಡಿಸಲಾಯಿತು. ಈ ನಿಧಿಯನ್ನು ಈಗಾಗಲೇ ಹಮ್ಮಿಕೊಂಡ ಕಾರ್ಯಕ್ರಮಗಳಿಗೆ ಖರ್ಚು ಮಾಡಲು ಕಾಟೇಜ ಬೋರ್ಡಿನ ಸ್ಥಾಯಿ ಕೈಮಗ್ಗದ ಸಮಿತಿಯು ಮುಖಾಂತರ ರಾಜ್ಯ ಸರಕಾರಗಳಿಗೆ ಹಂಚಲಾಯಿತು.

೧೯೪೮ ರಲ್ಲಿ ಸ್ಥಾಪಿಸಲ್ಪಟ್ಟ ಸ್ಥಾಯಿ ಕೈಮಗ್ಗದ ಸಮಿತಿಯು ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಗಾಗಿ ಮಾಡಿದ ಕಾರ್ಯಗಳು ನಿಜವಾಗಿ ಶ್ಲಾಘನೀಯವಾಗಿವೆ. ಈ ಸಮಿತಿ ಸರಕಾರಕ್ಕೆ ಅನೇಕ ಶಿಫಾರಸುಗಳನ್ನು ಮಾಡಿತು. ಅವುಗಳಲ್ಲಿ ಮುಖ್ಯವಾದುವು.

೧) ಅವಶ್ಯವಿದ್ದಲ್ಲಿ ಬಂಡವಾಳದ ಸಹಾಯ ಮಾಡಿ ನೇಕಾರರ ಸಹಕಾರಿ ಸಂಘಗಳನ್ನು ಸ್ಥಾಪಿಸಲು ಪ್ರೋತ್ಸಾಹಿಸಬೇಕು.

೨) ನೂಲಿನ ವಿತರಣೆಯಲ್ಲಿ ದಳ್ಳಾಳಿಗಳ ಸಂಖ್ಯೆಯನ್ನು ಕಡಿಮೆ ಮಾಡುವುದು.

೩) ಕೈಮಗ್ಗದ ನಿರ್ಯಾತವನ್ನು ಹೆಚ್ಚಿಸುವುದು.

೪) ಕೈಮಗ್ಗದ ಬಟ್ಟೆಗಳನ್ನು ಮಾರಾಟ ಕರದಿಂದ ವಿಮುಕ್ತಗೊಳಿಸುವುದು.

೧೯೫೨ ರಲ್ಲಿ ಕೈಮಗ್ಗದ ಉದ್ದಿಮೆ ಭಯಂಕರ ಗಂಡಾಂತರ ಪರಿಸ್ಥಿತಿಯನ್ನೆದುರಿಸಬೇಕಾಯಿತು. ಬಹು ಸಂಖ್ಯೆ ನೇಕಾರರು ನಿರುದ್ಯೋಗಿಗಳಾದರು, ಅಲ್ಲದೆ ಎಷ್ಟೋ ಜನ ಅರೆ ಉದ್ಯೋಗದಿಂದ ಬಳಲಹತ್ತಿದರು. ಇದನ್ನರಿತು ಸತತವಾದ ಅಭಿವೃದ್ಧಿ ಕ್ರಮಗಳನ್ನು ಕೈಕೊಂಡು ನೇಕಾರರ ಹಿತಚಿಂತನೆಗಾಗಿ ಶ್ರಮಿಸಲು ಭಾರತ ಸರಕಾರ ಅಖಿಲ ಭಾರತ ನೇಕಾರ ಮಂಡಲಿಯನ್ನು ಸ್ಥಾಪಿಸಿತು. ಮಂಡಳಿಯು ಸ್ಥಾಯಿ ಸಮಿತಿ ಕೆಳಗಿನ ಸೂಚನೆಗಳನ್ನು ಸರಕಾರದ ಮುಂದಿಟ್ಟಿತು.

೧) ನೂಲಿನ ಗಿರಣಿಯಲ್ಲಿಯ ೨ ಲಕ್ಷ ಕದರುಗಳನ್ನು ಕೈಮಗ್ಗದ ಉದ್ದಿಮೆಗೆ ತೆಗೆದಿರಿಸಬೇಕು.

೨) ೩ ಕೋಟಿ ರೂಪಾಯಿಗಳ ಪ್ರತ್ಯೇಕ ನಿಧಿಯನ್ನು ತೆಗೆದು ಇದರಿಂದ ಕೈಮಗ್ಗದ ಉದ್ದಿಮೆಗಳಿಗೆ ಸಾಲ ಸೌಲಭ್ಯಗಳನ್ನು ಸಹಕಾರಿ ಸಂಘಗಳ ಮುಖಾಂತರ ಒದಗಿಸಬೇಕು.

೩) ಕೈಮಗ್ಗದ ಬಟ್ಟೆಗಳ ಮಾರಾಟದ ಅಂಗಡಿಗಳನ್ನು ರಾಜ್ಯ ಮತ್ತು ಹೊರರಾಜ್ಯಗಳಲ್ಲಿ ತೆರೆಯಲು ಎಲ್ಲ ಅನುಕೂಲತೆಗಳನ್ನೊದಗಿಸಬೇಕು.

ಈ ಪ್ರತ್ಯೇಕ ನಿಧಿಯನ್ನು ಮಾರಾಟ ಹೆಚ್ಚಿಸಲು ಉಪಯೋಗಿಸಲಾಗುತ್ತಿತ್ತು. ನಿಧಿಯನ್ನು ಹೆಚ್ಚಿಸುವುದರ

ಸಲುವಾಗಿ ಬಟ್ಟೆಗಳ ಮೇಲಿನ ಡ್ಯೂಟಿ ಪ್ರಮಾಣವನ್ನು ಹೆಚ್ಚಿಸಲು ಉದ್ದೇಶಿಸಲಾಯಿತು. ಮತ್ತು ದೇಶದಲ್ಲಿ ಮಾರಾಟವಾಗುವ ಎಲ್ಲ ನಮೂನೆಯ ಗಿರಣಿ ಬಟ್ಟೆಯ ಮೇಲೆ ಈ ಕರವನ್ನು ಹಾಕಲು ಸೂಚಿಸಲಾಯಿತು. ಸರಕಾರದ ಸಾಮೂಹಿಕ ಆದಾಯದಿಂದಲೂ ಹಣವನ್ನು ತೆಗೆದಿರಿಸಿ ಈ ನಿಧಿಗೆ ಕೂಡಿಸಲಾಯಿತು. ಸೆಸ್ ಫಂಡನ್ನು ೧೯೫೩ ರಲ್ಲಿ ಸ್ಥಾಪಿಸಲಾಯಿತು ಮತ್ತು ಇದನ್ನು ಕೈಮಗ್ಗದ ಅಭಿವೃದ್ಧಿ ಯೋಜನೆಗಳಿಗೆ ವಿನಿಯೋಗಿಸಲಾಯಿತು.

೧೯೫೨ ರ ಸಾಮೂಹಿಕ ಮುಂದಗಾಲ, ಗಿರಣಿ ಮತ್ತು ಕೈಮಗ್ಗದ ರಂಗಗಳನ್ನು ತೊಂದರೆಗೀಡುಮಾಡಿತು. ಬಟ್ಟೆ ಮತ್ತು ನೂಲಿನ ಬೆಲೆಗಳು ಇಳಿಯುಹತ್ತಿದವು. ಕೈಮಗ್ಗದ ಉದ್ದಿಮೆ ಗಿರಣಿ ಹಾಗೂ ಪಾವರಲೂಮು ರಂಗಗಳ ಜೊತೆಯ ಸ್ಪರ್ಧೆಯನ್ನು ಎದುರಿಸಿ ತತ್ತರಿಸಿತು. ನೇಕಾರರ ನಿರುದ್ಯೋಗ ಸಮಸ್ಯೆ ಸರಕಾರದ ತಲೆ ತಿನ್ನಹತ್ತಿತು. ದಡಿ ಧೋತರ, ಬಣ್ಣದ ವಸ್ತುಗಳನ್ನು ಕೈಮಗ್ಗದ ಉದ್ದಿಮೆಗೆ ಮೀಸಲಾಗಿರಿಸಬೇಕೆಂಬ ಬೇಡಿಕೆಯನ್ನು ಸರಕಾರದ ಮುಂದಿರಿಸಿ ಅಲ್ಲಲ್ಲಿ ನೇಕಾರರು ಚಳವಳಿಯನ್ನೇ ಪ್ರಾರಂಭಿಸಿದರು. ಈ ಒತ್ತಡಕ್ಕೆ ಸರಕಾರ ಮಣಿದು "ಕಾನುಂಗೊ" ಅವರ ನೇತೃತ್ವದಲ್ಲಿ ಟೆಕ್ಸಟಾಯಿಲ ಎನ್‌ಕ್ವಾಯಿರಿ ಸಮಿತಿಯನ್ನು ರಚಿಸಿತು.

ಗಿರಣಿ, ಪಾವರಲೂಮು ಮತ್ತು ಕೈಮಗ್ಗ ಈ ಮೂರೂ ಕೈಗಾರಿಕೆಗಳ ಸ್ಪರ್ಧೆಯ ಸ್ವರೂಪ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಈ ರಂಗಗಳ ಸ್ಥಾನಮಾನಗಳನ್ನು

ಕೂಲಂಕಷವಾಗಿ ಅಭ್ಯಸಿಸಲು ಈ ಸಮಿತಿಯನ್ನು ಕೇಳಿ ಕೊಳ್ಳಲಾಯಿತು.

ಕನಂಗೊ ಸಮಿತಿ ತನ್ನ ವರದಿಯನ್ನು ೧೯೫೪ರಲ್ಲಿ ಒಪ್ಪಿಸಿತು. ಅದರಲ್ಲಿ ಅನೇಕ ಮಹತ್ವದ ಶಿಫಾರಸುಗಳನ್ನು ಮಾಡಲಾಗಿದೆ. ಆದರೆ ಅವುಗಳಲ್ಲಿ ಮುಖ್ಯವಾದವುಗಳು ಕೆಳಗಿನಂತಿವೆ.

೧) ೧೫ ರಿಂದ ೨೦ ವರ್ಷಗಳ ಅವಧಿಯಲ್ಲಿ ಹಂತ ಹಂತವಾಗಿ ಕೈಮಗ್ಗದ ಬದಲಾಗಿ ಪಾವರಲೂಂ ಮಗ್ಗ ಗಳನ್ನು ಸ್ಥಾಪಿಸಬೇಕು.

೨) ಸಧ್ಯ ಇದ್ದ ಕೆಲವು ವಸ್ತುಗಳನ್ನು ಕೈಮಗ್ಗದ ಉದ್ದಿಮೆಗೆ ಮೀಸಲಾಗಿರಿಸುವ (Reservation) ಆಜ್ಞೆ ಯನ್ನು ಮುಂದುವರಿಸಿಕೊಂಡು ಹೋಗಬೇಕು.

೩) ಗಿರಣಿಯು ಕೈಗಾರಿಕೆಯಲ್ಲಿ ನೂಲಿನ ವಿಭಾಗ ವನ್ನಷ್ಟೇ ವಿಸ್ತರಿಸಬೇಕು ಆದರೆ ನೆಯ್ಯುವ ವಿಭಾಗವನ್ನು ಸ್ಥಗಿತಗೊಳಿಸಬೇಕು.

ಸಮಿತಿಯು ಮೊದಲನೆ ಸೂಚನೆ ನಿರುದ್ಯೋಗಕ್ಕೆಡೆ ಮಾಡಿಕೊಡುತ್ತದೆಯೆಂಬ ಕಾರಣವನ್ನು ಮುಂದೆಮಾಡಿ ಅಖಿಲ ಭಾರತ ನೇಕಾರರ ಮಂಡಲಿ ಒಪ್ಪಲಿಲ್ಲ. ಉಳಿದೆಲ್ಲ ಶಿಫಾರಸುಗಳನ್ನು ಅದು ಸ್ವಾಗತಿಸಿತು. ಆದರೆ ಸರಕಾರ ಮಾತ್ರ ಸಮಿತಿಯು ಎಲ್ಲ ಸೂಚನೆಗಳನ್ನೂ ಅಂಗೀಕರಿಸಿ ಕಾರ್ಯ ರೂಪಕ್ಕೆ ತರಲು ಶ್ರಮಿಸಿತು.

ಈ ಅವಧಿಯ ಪೂರ್ವದಲ್ಲಿ ಸರಕಾರ ಕೆಳಗಿನ ಕೆಲವು ನಿರ್ದಿಷ್ಟ ಕ್ರಮಗಳನ್ನು ಕೈಮಗ್ಗದ ಉದ್ದಿಮೆಯ ಹಿತ ಚಿಂತನೆಯ ದೃಷ್ಟಿಯಿಂದ ಕೈಕೊಂಡಿತು.

೧) ಹತ್ತಿಯ ನೂಲನ್ನು ಉಪಯೋಗಿಸುವ ಹಳೆಯ ಪಾವರ ಮಗ್ಗಗಳನ್ನು ಮತ್ತು ಹೊಸ ಮಗ್ಗಗಳನ್ನು ಸರಕಾರ ನಿರ್ಬಂಧಿಸಿತು.

೨) ಪ್ರತಿಯೊಂದು ನೂಲಿನ ಗಿರಣಿಯು ಮೂರು ತಿಂಗಳಿಗೊಮ್ಮೆ ಕನಿಷ್ಠ ಪ್ರಮಾಣದ ನೂಲನ್ನು ಕೈಮಗ್ಗಗಳಿಗೆ ಒದಗಿಸಬೇಕೆಂದು ಆಜ್ಞೆ ಹೊರಡಿಸಿತು.

೩) ನೂಲಿನ ಯಂತ್ರಗಳ ಸಂಖ್ಯೆಯನ್ನು ಏರಿಸಿದ ಗಿರಣಿಗಳು ಹೆಚ್ಚಿನ ನೂಲನ್ನು ಕೈಮಗ್ಗದ ಉದ್ದಿಮೆಗೆ ಮೀಸಲಾಗಿರಿಸಬೇಕೆಂದು ಆದೇಶವಿತ್ತಿತು.

**ಕೈಮಗ್ಗ ಉದ್ದಿಮೆಯ ಯೋಜನೆಗಳು:**

ಪಂಚವಾರ್ಷಿಕ ಯೋಜನೆಗಳು ಪ್ರಾರಂಭವಾದಂದಿನಿಂದ ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ರೂಪಿಸಲಾಯಿತು. ಅವುಗಳಲ್ಲಿಯ ಕೆಲವು ಮುಖ್ಯ ಯೋಜನೆಗಳನ್ನು ಇಲ್ಲಿ ವಿವರಿಸಲಾಗಿದೆ.

**ಚರ ಬಂಡವಾಳದ ಯೋಜನೆ:**

ಭಾರತದ ರಿಝರ್ವ ಬ್ಯಾಂಕು ೧೯೫೦ರಲ್ಲಿ ಕೈಮಗ್ಗದ ಉದ್ದಿಮೆಗೆ ಸೋವಿ ದರದ ಸಾಲಕೊಡಲು ಒಂದು ಯೋಜನೆಯನ್ನು ರೂಪಿಸಿತು. ಈ ಯೋಜನೆಯ ಪ್ರಕಾರ ರಾಜ್ಯ

ಸಹಕಾರಿ ಬ್ಯಾಂಕುಗಳ ಮುಖಾಂತರ ಬ್ಯಾಂಕಿನ ಬಡ್ಡಿದರದಲ್ಲಿ ಸಾಲ ಒದಗಿಸಲಾಗುತ್ತಿತ್ತು. ಈ ಸಾಲದ ಅವಧಿ ೯೦ ದಿನಗಳ ವರೆಗೆ ಇದ್ದು, ಕಚ್ಚಾಮಾಲುಗಳನ್ನು ಖರೀದಿಸಲು ಮತ್ತು ವಸ್ತುಗಳ ಮಾರಾಟ ಮಾಡಲು ಸೀಮಿತವಾಗಿತ್ತು. ಈ ಸಾಲದ ಅವಧಿಯನ್ನು ೧೯೫೩ರಲ್ಲಿ ೧೨ ತಿಂಗಳಿಗೆ ಹೆಚ್ಚಿಸಿ ಕೆಲವು ಅಭಿವೃದ್ಧಿ ಕಾರ್ಯಕ್ರಮಗಳಿಗೆ ಅನುವುಮಾಡಿಕೊಡ ಲಾಯಿತು. ಶಾಶ್ವತ ಅಭಿವೃದ್ಧಿಕಾರ್ಯಗಳಿಗೆ ಹಾಗೂ ಚರ ಬಂಡವಾಳದ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಅಖಿಲ ಭಾರತ ನೇಕಾರರ ಮಂಡಲಿ ಸೆಸ್ ಫಂಡನ್ನು ಪ್ರಾಥಮಿಕ ಮತ್ತು ಅಪೆಕ್ಸ ಬ್ಯಾಂಕುಗಳ ಮೂಲಕ ಸಾಲ ಗಳನ್ನು ಕೈಮಗ್ಗದ ಕೇಂದ್ರಗಳಿಗೆ ಒದಗಿಸಬೇಕೆಂದು ಶಿಫಾರಸ್ ಮಾಡಿತು. ಈ ಶಿಫಾರಸನ್ನು ಸರಕಾರ ತಾತ್ವಿಕವಾಗಿ ಒಪ್ಪಿಕೊಂಡಿತಾದರೂ, ಚರಬಂಡವಾಳಕ್ಕೆ ಕೊಡಮಾಡುವ ಸಾಲ, ವ್ಯಾಪಾರಿ ಸಾಲವಾಗುವ್ರದರಿಂದ ನೇಮಿತ ಹಣಕಾಸಿನ ಸಂಸ್ಥೆಗಳಿಂದಲೇ ಒದಗಿಸಬೇಕೆಂದು ಪರಿಗಣಿಸಿತು. ಸರಕಾರದ ಈ ವಿಚಾರ ಸರಣಿ ದೇಶದಲ್ಲಿ ನಿಯುಮಬದ್ಧ ಹಣಕಾಸಿನ ಯೋಜನೆಯು ಉಗಮಕ್ಕೆ ಕಾರಣೀಭೂತವಾಯಿತು.

## ನಿಯುಮಬದ್ಧ ಹಣಕಾಸಿನ ಯೋಜನೆ:

ಈ ಯೋಜನೆಯನ್ವಯ, ಕೈಮಗ್ಗದ ಉದ್ದಿಮೆಯ ಚರ ಬಂಡವಾಳದ ಅವಶ್ಯಕತೆಯನ್ನು ಭಾರತದ ರಿಝರ್ವ ಬ್ಯಾಂಕಿನ ಮುಖಾಂತರ ಪೂರೈಸಬೇಕೆಂದು ನಿರ್ಣಯಿಸ

ಲಾಯಿತು. ರಿಝರ್ವ ಬ್ಯಾಂಕು ರಾಜ್ಯ ಸಹಕಾರಿ ಬ್ಯಾಂಕುಗಳಿಗೆ ಸಾಲಗಳನ್ನು ಕೊಡಮಾಡುವವು. ರಾಜ್ಯ ಸಹಕಾರಿ ಬ್ಯಾಂಕುಗಳು ಕೇಂದ್ರ ಸಹಕಾರಿ ಬ್ಯಾಂಕುಗಳಿಗೆ ಸಾಲಗಳನ್ನೀಯುವವು. ಅಪೆಕ್ಸ ಮತ್ತು ಪ್ರಾಥಮಿಕ ಸಹಕಾರಿ ಸಂಘಗಳು ಕೇಂದ್ರ ಬ್ಯಾಂಕುಗಳಿಂದ ಸಾಲ ಪಡೆದು ಉತ್ಪಾದನೆಗೆ ಹಾಗೂ ಮಾರಾಟಕ್ಕೆ ಕೈಮಗ್ಗದ ಉದ್ದಿಮೆಗಳಿಗೆ ಸಾಲಗಳನ್ನೀಯುವವು. ಈ ಯೋಜನೆ ೧೯೫೭ ರಿಂದ ಜಾರಿಗೆ ಬಂದಿತು. ಈ ಯೋಜನೆ ತುಂಬ ಅನುಕೂಲವಾಗಿದ್ದು ಸುಲಭವಾಗಿ ಹೊಂದಾಣಿಕೆ ಮಾಡಿಕೊಳ್ಳಲು ಸಾಧ್ಯವಿದ್ದುದರಿಂದ ಕೈಮಗ್ಗದ ಉದ್ದಿಮೆಗೆ ವಿಶೇಷ ಸೌಲಭ್ಯವನ್ನೊದಗಿಸಿಕೊಟ್ಟಂತಾಗಿದೆ. ಇದು ಇಂದಿಗೂ ಪ್ರಚಲಿತದಲ್ಲಿದೆ. ಪ್ರತಿಯೊಂದು ಮಗ್ಗಕ್ಕೆ ೩೦೦ ರೂಪಾಯಿಗಳಷ್ಟು ಗರಿಷ್ಠಸಾಲವನ್ನು ಕೊಡಲು ಯೋಜಿಸಲಾಗಿತ್ತು. ಮುಂದೆ ಈ ಮೊತ್ತವನ್ನು ೫೦೦ ರೂಪಾಯಿಗಳಿಗೆ ಏರಿಸಲಾಯಿತು. ಪ್ರತಿಯೊಂದು ಮಗ್ಗಕ್ಕೆ ೭೫೦ ರೂಪಾಯಿಗಳ ಮೊತ್ತದ ಸಾಲಕೊಡಬೇಕೆಂಬ ನೇಕಾರರ ಬೇಡಿಕೆ ಇನ್ನೂ ಈಡೇರಿಸಲ್ಪಟ್ಟಿಲ್ಲ. ಪ್ರಸ್ತುತ ಸ್ಥಿತಿಯಲ್ಲಿಯ ಕಚ್ಚಾ ಮಾಲಿನ ಬೆಲೆಗಳನ್ನು ಮತ್ತು ಮಾರುಕಟ್ಟೆಯ ಸಮಸ್ಯೆಗಳನ್ನು ಗಣನೆಗೆ ತೆಗೆದುಕೊಂಡರೆ, ನೇಕಾರರ ಬೇಡಿಕೆ ಯೋಗ್ಯ ಹಾಗೂ ನ್ಯಾಯ ಸಮ್ಮತವೆಂದು ಹೇಳಬಹುದು.

ಈ ಯೋಜನೆಯ ಮುಖ್ಯ ಕೊರತೆಯೆಂದರೆ, ಇಲ್ಲಿ ಕೊಡಮಾಡುವ ಸಾಲ ಕೇವಲ ಸಹಕಾರಿ ಸಂಘಗಳಲ್ಲಿ ಕೆಲಸ

ಮಾಡುವ ವರ್ಗಗಳಿಗಷ್ಟೇ ಸೀಮಿತವಾಗಿದೆ. ಬಹುಸಂಖ್ಯೆ ವರ್ಗಗಳು ಸಹಕಾರಿ ಸಂಘಗಳ ಕಕ್ಷೆಯಲ್ಲಿರದೇ ಇನ್ನಿತರ ವ್ಯವಸ್ಥೆಗಳಲ್ಲಿರುವುದರಿಂದ, ಈ ಸೌಲಭ್ಯ ಉದ್ದಿಮೆಯ ಸ್ವಲ್ಪಭಾಗಕ್ಕೆ ಅನ್ವಯಿಸುತ್ತದೆ. ಆದ್ದರಿಂದ ಬದಲಿ ವ್ಯವಸ್ಥೆಯನ್ನು ರೂಪಿಸಿ ಇಡಿ ಕೈಮಗ್ಗ ಕೇಂದ್ರಕ್ಕೆ ಸಹಾಯವಾಗುವಂತೆ ಮಾಡಬೇಕಾದುದು ಅವಶ್ಯ.

ರಾಜ್ಯ ಸಹಕಾರಿ ಬ್ಯಾಂಕುಗಳಿಗೆ ರಿಝರ್ವ ಬ್ಯಾಂಕಿನಿಂದ ಕೊಡಮಾಡಿದ ಪತ್ತಿನ ಮಿತಿಗಳು ಕೋಷ್ಟಕ ೨ರಲ್ಲಿ ತೋರಿಸಿದಂತಿವೆ.

*ಕೋಷ್ಟಕ ೨

(ವಿವರ: ಕೊಡಮಾಡಿದ ಪತ್ತಿನ ಮಿತಿಗಳು ರೂ. ಲಕ್ಷಗಳಲ್ಲಿ)

| ವರ್ಷ | ರೂ. | ವರ್ಷ | ರೂ. |
|---|---|---|---|
| ೧೯೫೭–೫೮ | ೧೮೦.೧೯ | ೧೯೫೮–೫೯ | ೨೨೭.೨೭ |
| ೧೯೫೯–೬೦ | ೨೩೨.೯೨ | ೧೯೬೦–೬೧ | ೨೯೫.೪೭ |
| ೧೯೬೧–೬೨ | ೩೬೮.೮೭ | ೧೯೬೨–೬೩ | ೫೧೮.೩೪ |
| ೧೯೬೩–೬೪ | ೫೧೬.೦೩ | | |

## ರಿಬೇಟ್ ಯೋಜನೆ

ಕೈಮಗ್ಗದ ಬಟ್ಟೆಗಳ ಮಾರಾಟವನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ರಿಬೇಟ ಯೋಜನೆಯನ್ನು ಕೈಕೊಳ್ಳಬೇಕೆಂದು ಅನೇಕ ಸಮಿತಿಗಳು ಹಾಗೂ ತಜ್ಞರು ಅಭಿಪ್ರಾಯ

*ಮೂಲ: A Study of Handloom Development Programme Programme Evaluation Organisation Planning Commission.

ಪಟ್ಟಿದ್ದರು. ಇದನ್ನು ಸರಕಾರ ಒಪ್ಪಿ ೧೯೫೪ರಲ್ಲಿ ರಿಬೇಟ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿತು. ೧ ರೂ.ಗೆ ೧½ ಆಣೆ ರಿಬೇಟನ್ನು ಕೊಡುವ ಕ್ರಮ ೧೯೫೪ರಿಂದ ೧೯೫೭ರ ವರೆಗೆ ಜಾರಿಯಲ್ಲಿತ್ತು. ಮುಂದೆ ಈ ದರವನ್ನು ೧೯೫೮–೬೦ರಲ್ಲಿ ೬ ಪೈಸೆಗೆ ಇಳಿಸಲಾಯಿತು; ಸಧ್ಯ ೫ ಪೈಸೆ ರಿಬೇಟನ್ನು ಕೊಡಲಾಗುತ್ತದೆ. ಲೋಕ ಮಾರಾಟದ ಮೇಲೆ ರೂಪಾಯಿಗೆ ೬ ಪೈಸೆಯನ್ನು ೧೯೫೫ ರಿಂದ ೧೯೫೯ರ ವರೆಗೆ ಕೊಡಮಾಡಲಾಗುತ್ತಿತ್ತು. ಆದರೆ ಮುಂದೆ ಈ ದರವನ್ನು ೩ ಪೈಸೆಗೆ ಇಳಿಸಲಾಯಿತು. ಇವುಗಳನ್ನುಳಿದು ಪ್ರತಿ ವರ್ಷ ಬೇರೆ ಬೇರೆಕಾಲಗಳಲ್ಲಿ ರಿಬೇಟನ್ನು ತಾತ್ಕಾಲಿಕ ವಾಗಿ ಕೊಡುವ ಉಪಕ್ರಮವನ್ನು ಹಮ್ಮಿಕೊಳ್ಳಲಾಯಿತು.

ಈ ರಿಬೇಟ ಯೋಜನೆಯ ಲಾಭ ಹಾನಿಗಳನ್ನು ಕುರಿತು ಇತ್ತಿತ್ತಲಾಗಿ ಅನೇಕ ತಜ್ಞರ ಅಭ್ಯಾಸದ ವರದಿಗಳು ಬೆಳಕಿಗೆ ಬಂದಿವೆ. ರಿಬೇಟಿನಿಂದ ನಿಜವಾದ ನೇಕಾರನಿಗೆ ಯಾವ ಲಾಭವಾಗಿಲ್ಲವೆಂದು, ತಜ್ಞರ ಅಭಿಪ್ರಾಯವಾಗಿದ್ದು, ಕೆಲವು ರಾಜ್ಯ ಸರಕಾರಗಳು ಈ ಯೋಜನೆಯನ್ನು ಕೈಬಿಟ್ಟವೆ. ಕೆಲವು ರಾಜ್ಯ ಸರಕಾರಗಳು ಇದರಿಂದ ಮಾರಾಟಕ್ಕೆ ಸಹಾಯ ವಾಗುತ್ತದೆಯೆಂದು ನಂಬಿ ಈ ಯೋಜನೆಯನ್ನು ಮುಂದು ವರಿಸಿಕೊಂಡು ಬಂದಿವೆ. ಆದರೆ ಇತ್ತೀಚಿನ ಅನುಭವದಂತೆ ಈ ಯೋಜನೆಯಿಂದ ಸಾಮಾನ್ಯ ನೇಕಾರನಿಗೆ ಯಾವ ಲಾಭವೂ ದೊರಕವೆ, ಕೇವಲ ಪುಢಾರಿಗಳಿಗೆ ಇದರ ಲಾಭ ದೊರಕಿದೆಯೆಂದು ತಿಳಿದು ಬರುತ್ತದೆ. ಇದು ದೊಡ್ಡ

ಪ್ರಮಾಣದ ಲಂಚಕ್ಕೆ ಹಾಗೂ ಕಳ್ಳ ವ್ಯಾಪಾರಕ್ಕೆಡೆ ಮಾಡಿಕೊಟ್ಟಿದೆ. ಬಹುಸಂಖ್ಯೆ ಸಹಕಾರಿ ಸಂಘಗಳಿಗೆ ಈ ಯೋಜನೆ ಹಣಗಳಿಸುವ ಸಾಧನವಾಗಿದೆ. ಆದರೆ ಪ್ರಾಮಾಣಿಕ ಸಂಘಗಳು ಮಾತ್ರ ಈ ಯೋಜನೆಯಿಂದ ಲಾಭ ಪಡೆದು ತನ್ಮೂಲಕ ನೇಕಾರರಿಗೆ ಲಾಭ ದೊರಕಿಸಿಕೊಟ್ಟಿವೆ. ಆದರೆ ದುರ್ದೈವದಿಂದ ಇಂಥ ಸಹಕಾರಿ ಸಂಘಗಳ ಸಂಖ್ಯೆ ಕೇವಲ ಬೆರಳ ಮೇಲೆಣಿಸುವಷ್ಟಿವೆ ಒಟ್ಟಾರೆ ಈ ಯೋಜನೆಯಿಂದ ನಿರೀಕ್ಷಿಸಿದ ಫಲ ದೊರಕಿಲ್ಲ.

ಸಹಕಾರಿ ನೂಲಿನ ಗಿರಣಿಗಳನ್ನು ಸ್ಥಾಪಿಸುವುದು, ಯೋಗ್ಯದರದಲ್ಲಿ ಸಾಕಷ್ಟು ಪ್ರಮಾಣದ ನೂಲಿನ ಪೂರೈಕೆಯಾಗಬೇಕೆಂಬ ಉದ್ದೇಶದಿಂದ ರಾಜ್ಯಗಳ ಕೈಮಗ್ಗಗಳ ಕೇಂದ್ರಗಳಲ್ಲಿ ಇಲ್ಲವೆ ಅವುಗಳ ಸಮೀಪಕ್ಕೆ ನೂಲಿನ ಗಿರಣಿಗಳನ್ನು ಸ್ಥಾಪಿಸುವ ಯೋಜನೆಯನ್ನು ಸರಕಾರ ಕೈಕೊಂಡಿತು. ಇಂಥ ಗಿರಣಿಗಳನ್ನು ಸಹಕಾರಿ ಪದ್ಧತಿಯಲ್ಲಿ ಪ್ರಾರಂಭಿಸಿದರೆ ತುಂಬ ಅನುಕೂಲವೆಂದು ಭಾವಿಸಿ ಸಹಕಾರಿ ನೂಲಿನ ಗಿರಣಿಗಳನ್ನು ಪ್ರೋತ್ಸಾಹಿಸಲಾಯಿತು. ಇದಕ್ಕೆ ಬೇಕಾಗುವ ಬಂಡವಾಳವನ್ನು ಸರಕಾರ ಹಾಗೂ ಸಹಕಾರಿ ಸಂಘಗಳು ಮತ್ತು ಸಾರ್ವಜನಿಕರಿಂದ ಪಡೆಯಲಾಗುತ್ತಿದೆ. ಈ ಗಿರಣಿಗಳಲ್ಲಿ ಉತ್ಪಾದಿಸಲ್ಪಟ್ಟ ನೂಲನ್ನು ಸುತ್ತು ಮುತ್ತಲಿನ ಕೈಮಗ್ಗದ ಕೇಂದ್ರಗಳಿಗೆ ಯೋಗ್ಯ ದರದಲ್ಲಿ ಮಾರಾಟಮಾಡಬೇಕು. ಹೆಚ್ಚಾದ ನೂಲನ್ನು ಪೇಟೆಯಲ್ಲಿ ಮಾರಬೇಕಾಗುತ್ತದೆ.

ತಾತ್ವಿಕವಾಗಿ ಈ ಯೋಜನೆ ತುಂಬ ವಿಶಾಲವಾಗಿದೆಯೆಂಬುದು ನಿಜ. ಆದರೆ ರೂಢಿಯಲ್ಲಿ ಈ ಯೋಜನೆಯಿಂದ ನಿರೀಕ್ಷಿಸಿದಷ್ಟು ಲಾಭವಾಗುವದೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಇದರ ಯಶಸ್ಸು ಜನರ ಹಾಗೂ ಆಡಳಿತ ರಂಗದ ಪ್ರಾಮಾಣಿಕತೆಯನ್ನೂ ಅವಲಂಬಿಸಿರುತ್ತದೆ. ಮೈಸೂರ ರಾಜ್ಯದಲ್ಲಿಯ ಅನುಭವದ ಆಧಾರದ ಮೇಲಿಂದ ಈ ಕ್ರಮದಿಂದ ನೂಲಿನ ಕೊರತೆಯ ಮೇಲೆ ಹಾಗೂ ಆದರ ಬೆಲೆಯ ಮೇಲೆ ಹೆಚ್ಚಿನ ಪ್ರಭಾವ ಬಿದ್ದಿಲ್ಲ. ಕೆಲವು ಗಿರಣಿಗಳು ಆಗಲೇ ಮುಚ್ಚಿದ್ದರೆ, ಇನ್ನು ಕೆಲವು ಗಿರಣಿಗಳು ವ್ಯಾಪಾರಿಗಳ ಪ್ರಭಾವಕ್ಕೊಳಗಾಗಿವೆ.

**ವಸತಿಗೃಹ ನಿರ್ಮಾಣ:**

ನೇಕಾರರು ಸ್ವಂತ ಮನೆಗಳನ್ನು ಹೊಂದುವ ಸಾಮರ್ಥ್ಯವುಳ್ಳವರಲ್ಲದ್ದರಿಂದ ಅವರಿಗೆ ಗೃಹಗಳ ನಿರ್ಮಾಣ ಸೋವಿದರದಲ್ಲಿ ಹಂಚುವ ಉದ್ದೇಶದಿಂದ ಸರಕಾರ ಈ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಸಹಕಾರಿ ಸಂಘಗಳ ಮೂಲಕ ಗೃಹಗಳನ್ನು ನಿರ್ಮಾಣಮಾಡಿ, ಧನಸಹಾಯ ಮಾಡಿ, ಸೋವಿದರದಲ್ಲಿ ಗೃಹಗಳನ್ನು ಹಂಚಲಾಗುತ್ತಿದೆ. ಗೃಹದ ಬೆಲೆಗಳನ್ನು ನೇಕಾರರ ಅನುಕೂಲ ಪ್ರಕಾರ ವಸೂಲ ಮಾಡಲಾಗುತ್ತಿದೆ. ಈ ಯೋಜನೆಯಿಂದ ಕೆಲವು ಕೈಮಗ್ಗದ ಕೇಂದ್ರಗಳಿಗೆ ಸಹಾಯವಾಗಿದೆ. ಆದರೆ ಬಹು ಸಂಖ್ಯೆ ಕೇಂದ್ರಗಳು ಗೃಹಗಳ ಅಭಾವದಿಂದ ಬಳಲುತ್ತಿವೆ.

**ಬಣ್ಣದ ಮನೆಗಳನ್ನು ಕಟ್ಟಿಸುವ ಯೋಜನೆ:**

ಆಧುನಿಕ ಪದ್ಧತಿಯಿಂದ ಬಣ್ಣಹಾಕುವ ರೂಢಿಯನ್ನು ಪ್ರಚಾರ ಮಾಡಲು ಮತ್ತು ಸೋಪಿದರದಲ್ಲಿ ಬಣ್ಣ ಹಾಕುವ ಸೌಲಭ್ಯ ಒದಗಿಸಲು ಬಣ್ಣದ ಮನೆಗಳನ್ನು ಕೈಮಗ್ಗದ ಕೇಂದ್ರಗಳಲ್ಲಿ ಸಹಕಾರಿ ಸಂಘಗಳ ಆಶ್ರಯದಲ್ಲಿ ಕಟ್ಟಿಸಿ, ಅವುಗಳಿಗೆ ಬೇಕಾಗುವ ಚರಬಂಡವಾಳವನ್ನೊದಗಿಸುವ ಯೋಜನೆಯನ್ನು ರೂಪಿಸಲಾಗಿದೆ. ಈ ಯೋಜನೆಯಲ್ಲಿ ಮೂರು ಗಾತ್ರದ ಬಣ್ಣದ ಮನೆಗಳನ್ನು ಕಟ್ಟುವ ಪದ್ಧತಿಗಳು ಕಂಡು ಬರುತ್ತವೆ. ೧೦೦, ೩೦೦ ಹಾಗೂ ೪೦೦ ಪೌಂಡ ನೂಲನ್ನು ಬಣ್ಣಮಾಡುವ ಸಾಮರ್ಥ್ಯವುಳ್ಳ ಮೂರು ಗಾತ್ರದ ಮನೆಗಳನ್ನು ನಿರ್ಮಿಸಲಾಗುತ್ತಿದೆ. ಮೂರನೆ ಪಂಚವಾರ್ಷಿಕ ಯೋಜನೆಯಲ್ಲಿ ೫೦೦ ಬಣ್ಣದ ಮನೆಗಳನ್ನು ನಿರ್ಮಿಸುವ ಗುರಿಯನ್ನು ಇಟ್ಟುಕೊಳ್ಳಲಾಗಿತ್ತು. ಈ ಯೋಜನೆಯಲ್ಲಿಯೂ ನಿರೀಕ್ಷಿಸಿದಷ್ಟು ಯಶಸ್ಸು ಕಂಡುಬರುವುದಿಲ್ಲ.

ಮಗ್ಗಗಳನ್ನು ನೊಂದಾಯಿಸುವ ಯೋಜನೆ ನಿರ್ದಿಷ್ಟ ಅಭಿವೃದ್ಧಿ ಯೋಜನೆ ರೂಪಿಸುವದನ್ನು ಬಿಟ್ಟು ಮಗ್ಗಗಳ ಸಂಖ್ಯೆಯ ಲೆಕ್ಕಾಚಾರ ಅತ್ಯಾವಶ್ಯ. ಆದ್ದರಿಂದ ದೇಶದಲ್ಲಿಯ ಒಟ್ಟು ಮಗ್ಗಗಳ ಸಂಖ್ಯೆಯನ್ನು ಗುರುತಿಸಲು ರಾಜ್ಯ ಸರಕಾರಗಳು ಕೈಮಗ್ಗಗಳನ್ನು ನೊಂದಾಯಿಸುವ ಕಾರ್ಯವನ್ನು ಕಟ್ಟುನಿಟ್ಟಾಗಿ ಕೈಗೆತ್ತಿಕೊಳ್ಳಬೇಕೆಂದು ಕೇಂದ್ರ ಸರಕಾರ ವಿನಂತಿಸಿಕೊಂಡಿತು. ಈ ಪ್ರಕಾರ ನೊಂದಾ

ಯಿಸಲ್ಪಟ್ಟ ಒಟ್ಟು ಮಗ್ಗಗಳ ಸಂಖ್ಯೆ ೧೪೬೨ರಲ್ಲಿ ೨೮.೪ ಲಕ್ಷ ಇತ್ತು. ಅವುಗಳಲ್ಲಿ ೧೨.೬ ಲಕ್ಷ ಮಗ್ಗಗಳು ಸಹಕಾರಿ ಸಂಘಗಳ ಆಶ್ರಯದಲ್ಲಿ ಕೆಲಸ ಮಾಡುತ್ತಿದ್ದವು. ಸಹಕಾರಿ ಸಂಘಗಳಲ್ಲಿದ್ದ ಒಟ್ಟು ಮಗ್ಗಗಳಲ್ಲಿ ಶೇ.೬೦ ರಷ್ಟು ಮಗ್ಗಗಳು ಮಾತ್ರ ಚಾಲು ಸ್ಥಿತಿಯಲ್ಲಿದ್ದು ಉಳಿದ ಮಗ್ಗಗಳು ಬಂದು ಬಿದ್ದಿದ್ದವು. ಸಹಕಾರಿ ಸಂಘದ ಆಶ್ರಯದಲ್ಲಿದ್ದ ಮಗ್ಗಗಳ ಪೂರ್ಣ ವಿವರವನ್ನು ಕೆಳಗಿನ ಕೋಷ್ಟಕ ೩ ರಲ್ಲಿ ಕೊಡಲಾಗಿದೆ.

*ಕೋಷ್ಟಕ್ ೩

| ವರ್ಷ | ಮಗ್ಗಗಳ ಸಂಖ್ಯೆ (ಲಕ್ಷದಲ್ಲಿ) | ಚಾಲೂ ಇದ್ದ ಮಗ್ಗಗಳು (ಲಕ್ಷದಲ್ಲಿ) | ಬಂದು ಬಿದ್ದ ಮಗ್ಗಗಳು (ಶೆ) |
|---|---|---|---|
| ೧೯೫೭–೫೮ | ೧೧.೫೯ | ೭.೩೯ | ೬೩.೮ |
| ೧೯೫೮–೫೯ | ೯.೬೩ | ೬.೨೬ | ೬೫.೦ |
| ೧೯೫೯–೬೦ | ೧೨.೦೩ | ೭.೫೭ | ೬೨.೯ |
| ೧೯೬೦–೬೧ | ೧೨.೬೯ | ೭.೭೧ | ೬೦.೭ |
| ೧೯೬೧–೬೨ | ೧೨.೫೭ | ೭.೩೪ | ೫೮.೪ |
| ೧೯೬೨–೬೩ | ೧೩.೬೨ | ೮.೩೬ | ೬೧.೪ |

ಸಹಕಾರಿ ಸಂಘಗಳ ಆಶ್ರಯದಲ್ಲಿರುವ ಒಟ್ಟು ಮಗ್ಗಗಳ ಸಂಖ್ಯೆ ಬೆಳೆಯುತ್ತಿದ್ದರೂ, ಬಂದು ಬಿದ್ದ ಮಗ್ಗಗಳ

*ಮೂಲ : A Study of Handloom Development Programme.

ಶೇಕಡಾ ಕಡಿಮೆಯಾಗದಿರುವುದನ್ನು ಮೇಲಿನ ಕೋಷ್ಟಕ ದಲ್ಲಿ ಗಮನಿಸಬಹುದಾಗಿದೆ. ಇತ್ತೀಚಿನ ಅಂಕಿ ಅಂಶಗಳ ಪ್ರಕಾರ ನೇಕಾರರ ಸಹಕಾರಿ ಸಂಘಗಳ ಆಶ್ರಯದಲ್ಲಿದ್ದ ಮಗ್ಗಗಳ ಸಂಖ್ಯೆಯೂ ಕಡಿಮೆಯಾಗಹತ್ತಿದೆ. ಬಂದು ಬಿದ್ದ ಮಗ್ಗಗಳ ಸಂಖ್ಯೆಯೂ ಹೆಚ್ಚಾಗಹತ್ತಿದೆ. ಕೈಮಗ್ಗದ ಉದ್ದಿಮೆಯಲ್ಲಿಯು ಸಹಕಾರಿ ಪದ್ಧತಿ ಕುಸಿಯುತ್ತಿದೆ. ಎಲ್ಲ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಬೇಕಾಗುವ ಸಹಾಯಧನವನ್ನು ರಾಜ್ಯ ಸರಕಾರಗಳ ಮೂಲಕ ಕೇಂದ್ರ ಸರಕಾರ ಕೊಡುತ್ತದೆ. ಒಟ್ಟು ಮಗ್ಗಗಳ ಸಂಖ್ಯೆ ಹಾಗೂ ನೂಲಿನ ಉಪಯೋಗದ ಆಧಾರದ ಮೇಲಿಂದ ಸಹಾಯಧನದ ಮೊತ್ತವನ್ನು ನಿರ್ಧರಿಸಲಾಗುತ್ತದೆ. ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಯೋಜನೆಗಳಿಗಾಗಿ ರಾಜ್ಯ ಸರಕಾರಗಳಿಗೆ ಕೇಂದ್ರ ಸರಕಾರ ಕೊಡಮಾಡುವ ಹಣಕಾಸು ಎರಡು ಪ್ರಕಾರದ್ದಿದೆ. i) ಸಾಲ ಮತ್ತು ii) ಸಹಾಯಧನ. ಅಭಿವೃದ್ಧಿಪರ ಕಾರ್ಯಕ್ರಮಗಳಾದ ತರಬೇತಿ ಮತ್ತು ಸಂಶೋಧನ ಚಟುವಟಿಕೆಗಳಿಗೆ ಹಾಗೂ ಕೈಮಗ್ಗದ ಬಟ್ಟೆಯ ಮಾರಾಟ ಹೆಚ್ಚಿಸಲು ರೂಪಿಸುವ ಕಾರ್ಯಕ್ರಮಗಳಿಗೆ ಸಹಾಯಧನ ವನ್ನೀಯುತ್ತಿದ್ದರೆ, ಚರಬಂಡವಾಳದ ಉದ್ದೇಶಗಳಿಗೆ ಹಾಗೂ ವಾಣಿಜ್ಯ ಚಟುವಟಿಕೆಗಳಿಗೆ ಸಾಲವನ್ನು ಕೊಡ ಮಾಡಲಾಗುತ್ತದೆ.

೧೯೫೩–೫೪ ರಿಂದ ೧೯೫೫-೫೬ರ ವರೆಗಿನ ಕಾಲಾವಧಿ ಯಲ್ಲಿ ಬೇರೆ ಬೇರೆ ಯೋಜನೆಗಳಿಗೆ ಕೊಡಮಾಡಿದ ಸಾಲ

ಹಾಗೂ ಸಹಾಯಧನಗಳ ವಿವರ ಕೆಳಗಿನ ಕೋಷ್ಟಕದಲ್ಲಿ ಕೊಡಲಾಗಿದೆ.

### *ಕೋಷ್ಟಕ ೪

| | | ಖರ್ಚು (ರೂ.ಲಕ್ಷಗಳಲ್ಲಿ) | ಶೇಕಡಾ |
|---|---|---|---|
| ೧. | ಯೋಜನೆಗಳ ಗುಂಪು | | |
| ೨. | ಕೈಮಗ್ಗದ ಉದ್ದಿಮೆಯ ಸಂಘಟನೆ (ನೇಕಾರರಿಗೆ ಕೊಟ್ಟ ಶೇರು ಬಂಡವಾಳ) | ೪೪.೬೦ | ೪.೬ |
| ೩. | ಉತ್ಪಾದನೆ ಹಾಗೂ ಮಾರಾಟಕ್ಕೆ ಕೊಟ್ಟ ಚರಬಂಡವಾಳ | ೪೯೪.೯೯ | ೫೫.೬ |
| ೪. | ಕೈಮಗ್ಗದ ಬಟ್ಟೆಯ ಮಾರಾಟಕ್ಕೆ | ೬೧.೬೦ | ೬.೩ |
| ೫. | ಉತ್ಪಾದನೆ ಮತ್ತು ಮಾರಾಟಕ್ಕೆ ಕೊಟ್ಟ ನೇರ ಸಹಾಯಧನ | ೨೨೭.೪೬ | ೨೩.೫ |
| ೬. | ಯಾಂತ್ರಿಕ ಸುಧಾರಣೆ | ೪೬.೫೬ | ೪.೮ |
| ೭. | ಸಂಘಟನೆಯ ಖರ್ಚುಗಳು | ೨೦.೯ | ೨.೧ |
| ೮. | ಯಾಂತ್ರಿಕ ಅಭಿವೃದ್ಧಿಗೆ (ಬಣ್ಣದ ಮನೆ ಫಿನಿಷಿಂಗ ಮತ್ತು ಕ್ಯಾಲಂಡರಿಂಗ ಪ್ಲಾಂಟುಗಳಿಗೆ) | ೨೩.೯೯ | ೨.೩ |
| ೯. | ತರಬೇತಿ ಮತ್ತು ಸಂಶೋಧನೆ | ೨.೫೯ | ೦.೩ |
| ೧೦. | ಸಹಕಾರಿ ನೂಲಿನ ಗಿರಣಿಗಳು | ೦.೫೯ | ೦.೧ |
| ೧೧. | ಔದ್ಯೋಗಿಕ ಸಹಕಾರಿ ಸಂಘಗಳು | ೨.೪೮ | ೦.೩ |
| ೧೨. | ಗೃಹ ನಿರ್ಮಾಣ ಯೋಜನೆ | ೦.೭೧ | ೦.೧ |

*ಮೂಲ: A Study of Handloom Development Programme.

ಪ್ರಥಮ ಪಂಚವಾರ್ಷಿಕ ಯೋಜನೆಯ ಮೊದಲ ಮೂರು ವರ್ಷಗಳಲ್ಲಿ ಕೈಮಗ್ಗದ ಉದ್ದಿಮೆಗಾಗಿ ತೆಗೆದಿರಿಸಿದ ಒಟ್ಟು ಹಣದ ಶೇಕಡಾ ೮೦ ರಷ್ಟನ್ನು ಜರಬಂಡವಾಳ ಮಾರಾಟ ಅಂಗಡಿಗಳಿಗೆ, ನೂಲಿನ ರಿಬೇಟಿಗೆ ಮತ್ತು ಇನ್ನಿತರ ಕಚ್ಚಾಮಾಲನ್ನು ರಿಯಾಯಿತಿ ದರದಲ್ಲಿ ಪೂರೈಸಲಿಕ್ಕೆ ಖರ್ಚು ಮಾಡಲಾಯಿತು. ತತ್ಫಲವಾಗಿ ಉದ್ಯೋಗ ಚೇತರಿಸಿಕೊಂಡಿತು. ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಗಾಗಿ ಪ್ರಸ್ತುತ ಯೋಜನೆಯಲ್ಲಿ ರಾಜ್ಯಸರಕಾರಗಳು ಬಹಳ ಶ್ರಮಿಸಿದವು.

ದುರ್ದೈವದಿಂದ ಎರಡನೆ ಪಂಚವಾರ್ಷಿಕ ಯೋಜನೆಯಲ್ಲಿ ರಾಜ್ಯ ಸರಕಾರಗಳ ಒಲವು ಉದ್ದಿಮೆಯ ಕಡೆಗೆ ಕಡಿಮೆಯಾಯಿತು. ಈ ಉದ್ದಿಮೆಗಾಗಿ ತೆಗೆದಿರಿಸಿದ ಹಣವನ್ನು ಖರ್ಚುಮಾಡಲಿಲ್ಲವಷ್ಟೆ ಅಲ್ಲ, ಈ ಹಣವನ್ನು ಬೇರೆ ಯೋಜನೆಗಳಿಗೆ ಉಪಯೋಗಿಸಿದವು. ಈ ಯೋಜನೆಯಲ್ಲಿ ತೆಗೆದಿರಿಸಲಾದ ಒಟ್ಟು ೮೩.೫ ಕೋಟಿ ರೂಪಾಯಿಗಳಲ್ಲಿ ಕೇವಲ ೨೫.೪೮ ಕೋಟಿ ರೂಪಾಯಿಗಳನ್ನು ರಾಜ್ಯ ಸರಕಾರಗಳು ಖರ್ಚುಮಾಡಿದವು. ಅಭಿವೃದ್ಧಿ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಆಗುವ ವಿಳಂಬವನ್ನು ಅನುಲಕ್ಷಿಸಿ ಕೇಂದ್ರ ಸರಕಾರ ಇದನ್ನು ತಡೆಗಟ್ಟಲು ಈ ಯೋಜನೆಗಳಿಗೆ ತಗಲುವ ಖರ್ಚನ್ನು ವೇಜ ಆ್ಯಂಡ ಮೀನ್ಸ (Ways & Means) ಸಾಲದ ಕ್ರಮದ ಮೂಲಕ ಹಣವನ್ನೊದಗಿಸುವ ವಿಧಿಯನ್ನು ೧೯೫೮ ರಲ್ಲಿ ಜಾರಿಗೆ ತರಲಾಯಿತು.

ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಚಲಿತದಲ್ಲಿದ್ದ ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಂದುವರಿಸಿಕೊಂಡು ಬರಲಾಯಿತು. ಕೈಮಗ್ಗದ ಕೇಂದ್ರಗಳಲ್ಲಿರುವ ನೇಕಾರರಿಗೆ ಸಂಪೂರ್ಣ ಉದ್ಯೋಗದಲ್ಲಿ ತೊಡಗಿಸಿ ಕೈಮಗ್ಗದ ಉತ್ಪಾದನೆಯನ್ನು ಹೆಚ್ಚಿಸಲು ಉದ್ದೇಶಿಸಲಾಯಿತು. ಈ ಯೋಜನೆಯ ಅವಧಿಯಲ್ಲಿ ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಗೆ ಒಟ್ಟು ೩೪ ಕೋಟಿ ರೂಪಾಯಿಗಳನ್ನು ತೆಗೆದಿರಿಸಿ ಅದರಲ್ಲಿ ೩೧ ಕೋಟಿ ರೂಪಾಯಿಗಳನ್ನು ರಾಜ್ಯ ಸರಕಾರಗಳ ಯೋಜನೆಗೆ ಹಾಗೂ ೩ ಕೋಟಿ ರೂಪಾಯಿಗಳನ್ನು ಕೇಂದ್ರ ಸರಕಾರದ ಯೋಜನೆಗೆ ವಿನಿಯೋಗಿಸುವ ನಿರ್ಣಯವಾಯಿತು.

ವಾರ್ಷಿಕ ಯೋಜನೆಗಳಲ್ಲಿ ಹಾಗೂ ಚತುರ್ಥ ಪಂಚವಾರ್ಷಿಕ ಯೋಜನೆಯಲ್ಲಿ ಹಿಂದೆ ಹಮ್ಮಿಕೊಂಡ ಕಾರ್ಯಕ್ರಮಗಳನ್ನು ಮುಂದುವರಿಸಿಕೊಂಡು ಬರಲಾಯಿತು.

ಯೋಜನೆಗಳ ಗುರಿ ಮತ್ತು ಸಾಧನೆಗಳನ್ನು ಕೆಳಗಿನ ಕೋಷ್ಟಕ ೫ ರಲ್ಲಿ ಕೊಡಲಾಗಿದೆ.

* ಕೋಷ್ಟಕ ೫

| ಯೋಜನೆಗಳು | ಗುರಿ(ದ.ಲ.ಗಜ) | ಸಾಧನೆ(ದ.ಲ.ಗಜ) |
|---|---|---|
| ೧. ಪ್ರಥಮ ಪಂಚ ವಾರ್ಷಿಕ ಯೋಜನೆ | ೧,೭೦೦ | ೧,೪೫೦ |
| ೨. ದ್ವಿತೀಯ ,, | ೨,೧೦೦ | ೨,೫೯೨ |
| ೩. ತೃತೀಯ ,, | ೩,೮೦೦ | ೨,೦೫೦-೨೧೫೦ |

*ಮೂಲ : A Study of Handloom Development Programme.

(ಈ ಸಂಖ್ಯೆ ಪಾವರಲೂಮ ಉತ್ಪಾದನೆಯನ್ನೊಳಗೊಂಡಿದೆ.)

ಕೈಮಗ್ಗದ ಬಟ್ಟೆಯ ಉತ್ಪಾದನೆಯ ಗುರಿಗಳನ್ನು ಯಾವ ಯೋಜನೆಯಲ್ಲಿಯೂ ಸಾಧಿಸಲಾಗಿಲ್ಲವೆಂಬುದು ಮೇಲಿನ ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. ಇದು ನಿಜವಾಗಿ ದುರ್ದೈವದ ಸಂಗತಿಯೇ ಸರಿ.

ಮೇಲೆ ವಿವರಿಸಿದ ಅಭಿವೃದ್ಧಿ ಯೋಜನೆಗಳ ಮಹತ್ವ ಎಲ್ಲ ರಾಜ್ಯಗಳಲ್ಲಿ ಒಂದೇ ಆಗಿಲ್ಲ. ಬೇರೆ ಬೇರೆ ರಾಜ್ಯಗಳಲ್ಲಿ ಅಲ್ಲಿಯ ಸ್ಥಿತಿಗಳಿಗನುಸರಿಸಿ ಈ ಯೋಜನೆಗಳಿಗೆ ಬೇರೆ ಬೇರೆ ಮಹತ್ವವನ್ನು ಕೊಡಲಾಗಿದೆ. ಎಲ್ಲ ಯೋಜನೆಗಳ ಸರ್ವಸಾಮಾನ್ಯ ರೂಪ ಒಂದೇಯಾಗಿದ್ದರೂ ರಾಜ್ಯಗಳಲ್ಲಿ ಮಾತ್ರ ಅಲ್ಲಿಯ ಪರಿಸ್ಥಿತಿಗನುಗುಣವಾಗಿ ವಿವಿಧ ಯೋಜನೆಗಳನ್ನು ರಚಿಸಲಾಗಿದೆ.

## ೩. ಅಭಿವೃದ್ಧಿ ಕಾರ್ಯಕ್ರಮಗಳ ಮೌಲ್ಯಮಾಪನ

ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಗಾಗಿ ಸರಕಾರ ಅನೇಕ ನೀತಿಗಳನ್ನು ನಿರೂಪಿಸಿ ಬಹುಸಂಖ್ಯೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವದೇನೊ ನಿಜ. ಆದರೆ ಈ ಕಾರ್ಯಕ್ರಮಗಳು ನಿರೀಕ್ಷಿಸಿದ ಫಲವನ್ನೀಯುತ್ತಿಲ್ಲವೆಂಬ ಸಂಗತಿ ಕೈಮಗ್ಗದ ಉದ್ದಿಮೆಯ ಸಧ್ಯದ ಸ್ಥಿತಿಯನ್ನು ಗಮನಿಸಿದಾಗ ಗೋಚರವಾಗುತ್ತದೆ. ನೀತಿ ನಿರೂಪಣೆಯ ಸಮಯದಲ್ಲಿದ್ದ ಸಮಸ್ಯೆಗಳೇ ಇಂದು ಕಂಡು ಬರುವುದರಿಂದ ಸರಕಾರದ ಪ್ರಯತ್ನಗಳು ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಗೆ ಶಾಶ್ವತ ಪರಿಹಾರ ನೀಡಿಲ್ಲವೆಂಬುದು ವಿದಿತವಾಗುತ್ತದೆ. ಸರಕಾರ ನೀತಿ ನಿರೂಪಣೆಯಲ್ಲಿ ಹಾಗೂ ಸಮಸ್ಯೆಯನ್ನು ಅರಿತುಕೊಳ್ಳುವಲ್ಲಿ ಹಿಂದೆ ಬಿದ್ದಿಲ್ಲ. ಆದರೆ ಅದರ ಕರ್ತೃತ್ವ ಶಕ್ತಿಯಲ್ಲಿ ಮಾತ್ರ ಕೊರತೆ ಕಂಡು ಬರುತ್ತಿದೆಯೆಂದು ಬರಗಾಲ ನಿಯೋಗ ಬಹುದಿನಗಳ ಹಿಂದೆ ಹೇಳಿದ ಮಾತು ಇಂದೂ ಸತ್ಯವಾಗಿದೆ. ಪರಿಣಾಮಕಾರಿ ಸಂಘಟನೆ ಈ ಉದ್ದಿಮೆಯಲ್ಲಿ ನಿರ್ಮಾಣವಾಗುವವರೆಗೂ ಸರಕಾರದ ಅಭಿವೃದ್ಧಿ ಕ್ರಮಗಳಿಂದ ಹೆಚ್ಚಿನ ಲಾಭ ನೇಕಾರರಿಗೆ ದೊರಕಲಾರದು. ಸಧ್ಯ ಇದ್ದ ಸಹಕಾರಿ ಪದ್ಧತಿಯ ದಕ್ಷತೆಯನ್ನು ಪ್ರಶ್ನಿಸಬಹುದಾಗಿದೆ. ಇಂದು ದೇಶದಲ್ಲಿ ಈ ಪದ್ಧತಿ ಕುಗ್ಗ ಹತ್ತಿದೆ. ಇದು ನೇಕಾರರನ್ನು ಆಕರ್ಷಿಸುತ್ತಿಲ್ಲ.

ಭಾರತ ಸರಕಾರ, ಯೋಜಕರು ಹಾಗೂ ಕೆಲವು ತಜ್ಞರು ಸಹಕಾರಿ ಪದ್ಧತಿಯಲ್ಲಿ ತುಂಬ ವಿಶ್ವಾಸ ತಳೆದಿದ್ದಾರೆ. ಈ ಅಭಿವೃದ್ಧಿಯೋಜನೆಗಳನ್ನು ಕಾರ್ಯಗತಗೊಳಿಸಲು ಈ ಪದ್ಧತಿಯೇ ಪರಿಣಾಮಕಾರಿಯಾದ ಸಾಧನವೆಂದು ತರ್ಕಿಸಿದ್ದಾರೆ. ಅವ್ಯವಸ್ಥೆ ಹಾಗೂ ಸಂಘಟನೆಯ ಕೊರತೆಯಿಂದ ಕೂಡಿದ ಕೈಮಗ್ಗದ ಉದ್ದಿಮೆಗೆ ಪರಿಣಾಮಕಾರಿಯಾದ ಸಂಘಟನೆಯ ಆವಶ್ಯಕತೆ ಇರುತ್ತದೆ. ಈ ಕೊರತೆಯನ್ನು ತುಂಬುವ ಈ ಏಕಮಾತ್ರ ಸಾಧನ ಸಹಕಾರಿ ಪದ್ಧತಿಯೆಂದು ಯೋಜಕರು ನಂಬಿದ್ದಾರೆ. ಆದರೆ ಇತ್ತೀಚಿನ ಅನುಭವದ ಆಧಾರದ ಮೇಲಿಂದ, ಸಹಕಾರಿ ಪದ್ಧತಿ ನಿರೀಕ್ಷಿಸಿದ ಪರಿಣಾಮಗಳನ್ನಿತ್ತಿಲ್ಲವೆಂಬುದು ಸ್ಪಷ್ಟವಾಗಿದೆ. ಸುಮಾರು ಆರು ದಶಕಗಳಿಂದ ಈ ಪದ್ಧತಿಯ ಅಭಿವೃದ್ಧಿಗಾಗಿ ಸರಕಾರ ಏನೆಲ್ಲ ಪ್ರಯತ್ನಗಳನ್ನು ಮಾಡುತ್ತಿದ್ದರೂ ಅದು ಇಂದಿಗೂ ತನ್ನ ಕಾಲಮೇಲೆ ನಿಲ್ಲುವ ಶಕ್ತಿಯನ್ನು ಪಡೆದಿಲ್ಲ. ಇಂದಿಗೂ ಸಹಕಾರಿ ಸಂಘಗಳು ಮುಚ್ಚುತ್ತಿರುವ ಉದಾಹರಣೆ ಕಡಿಮೆಯೇನಿಲ್ಲ. ಈ ಪದ್ಧತಿಯನ್ನು ಬೆಳೆಸಬೇಕೆಂಬ ಸರಕಾರದ ೬೦ ವರ್ಷಗಳ ಸತತ ಪರಿಶ್ರಮ ನಿರೀಕ್ಷಿಸಿದ ಪ್ರಮಾಣದಲ್ಲಿ ಯಶಸ್ಸನ್ನು ಗಳಿಸಿರುವದಿಲ್ಲ.

ಈ ಸಂದರ್ಭದಲ್ಲಿ ಭಾರತದ ರಿಝರ್ವ ಬ್ಯಾಂಕಿನ ಸಹಕಾರಿ ಸಂಘಗಳ ಪ್ರಗತಿಯ ವರದಿಯನ್ನು ಉಲ್ಲೇಖಿಸುವುದು ಉಚಿತವೆಂದು ತೋರುತ್ತದೆ. ಸಧ್ಯ ದೇಶದಲ್ಲಿರುವ ೩೦,೦೫,೦೦೦ ಒಟ್ಟು ಮಗ್ಗಗಳಲ್ಲಿ ಕೇವಲ ೧೧.೮ ಲಕ್ಷ

ಮಗ್ಗಗಳು (ಶೇ. ೩೯.೫) ಮಾತ್ರ ಸಹಕಾರಿ ಸಂಘಗಳ ಆಶ್ರಯದಲ್ಲಿವೆ. ಒಟ್ಟು ೭೫ ಲಕ್ಷ ನೇಕಾರರಲ್ಲಿ ಕೇವಲ ೧೨, ೮೯, ೪೭೩ (೧೭.೨%) ಜನ ನೇಕಾರರು ಸಹಕಾರಿ ಸಂಘಗಳ ಸದಸ್ಯರಾಗಿದ್ದಾರೆ. ಜೂನ ೧೯೬೯ ರಲ್ಲಿ ೧೨,೫೬೬ ನೇಕಾರರ ಪ್ರಾಥಮಿಕ ಸಹಕಾರಿ ಸಂಘಗಳಿದ್ದು ಅವುಗಳಲ್ಲಿ ೬,೩೩೨ (ಶೇ. ೫೦ ೪) ಸಂಘಗಳು ಮುಚ್ಚಲ್ಪಟ್ಟಿವೆ. ಜೂನ ೧೯೬೯ರಲ್ಲಿ ಸಹಕಾರಿ ಸಂಘಗಳ ಒಟ್ಟು ಸದಸ್ಯರ ಸಂಖ್ಯೆ ೧೨,೮೯,೪೭೩ ಇದ್ದು, ಅದರಲ್ಲಿ ೪,೩೩,೩೯೭ ಜನ ಸದಸ್ಯರು ಮುಚ್ಚಿದ ಸಂಘಗಳ ಸದಸ್ಯರಾಗಿದ್ದರು.

ಸಹಕಾರಿ ಸಂಘಗಳ ಒಟ್ಟು ಚರಬಂಡವಾಳ ೩೬.೪ ಕೋಟಿ ರೂಪಾಯಿಗಳಿದ್ದು, ಅದರಲ್ಲಿ ಸ್ವಂತದ ಬಂಡವಾಳ ೧೪.೨ ಕೋಟಿ ರೂಪಾಯಿ ಇದ್ದರೆ ೨.೮ ಕೋಟಿ ರೂ. ಬಂಡವಾಳ ಠೇವಣಿಗಳಿಂದ ಬಂದದ್ದು, ಉಳಿದ ೧೯.೩ ಕೋಟಿ ರೂಪಾಯಿ ಬಂಡವಾಳವನ್ನು ವಿವಿಧ ಸಾಲಗಳಿಂದ ಪಡೆಯಲಾಗಿತ್ತೆಂಬುದನ್ನು ಗಮನಿಸಿದರೆ, ಸಹಕಾರಿ ಸಂಘಗಳು ತುಂಬ ದುಃಸ್ಥಿತಿಯಲ್ಲಿವೆಯೆಂಬುದು ಗೋಚರವಾಗುತ್ತದೆ. ಇತ್ತೀಚೆಗೆ ಸಹಕಾರಿ ಸಂಘಗಳ ಉತ್ಪಾದನೆ ಮತ್ತು ಮಾರಾಟಗಳು ಗಣನೀಯವಾಗಿ ಕುಸಿಯುತ್ತಿವೆ. ನೂಲು ಖರೀದಿಯ ಬೆಲೆಯ ಮೊತ್ತ ೩೯.೪ ಕೋಟಿ ರೂಪಾಯಿಯಿಂದ (೧೯೬೨-೬೮) ೨೮.೨ ರೂ ಕೋಟಿ ರೂಪಾಯಿಗೆ (೧೯೬೮-೬೯) ಇಳಿದರೆ ಒಟ್ಟು ಉತ್ಪಾದಿಸಲ್ಪಟ್ಟ ಹಾಗೂ ಮಾರಾಟವಾದ ಬಟ್ಟೆಯ ಬೆಲೆ ಅನುಕ್ರಮವಾಗಿ ರೂ. ೪೬.೮

ಕೋಟಿ ಮತ್ತು ರೂ. ೪೯.೨ ಕೋಟಿ ೧೯೬೭–೬೮ ರಲ್ಲಿ ಇದ್ದರೆ ರೂ. ೪೫.೩ ಕೋಟಿ ಹಾಗೂ ರೂ. ೫೦.೬ ಕೋಟಿ ೧೯೬೮–೬೯ ರಲ್ಲಿ ಇದ್ದಿತು.

ಜೂನ ೧೯೬೯ರಲ್ಲಿ ಸಹಕಾರಿ ಸಂಘದ ಆಶ್ರಯದಲ್ಲಿದ್ದ ಒಟ್ಟು ೧೧.೮ ಲಕ್ಷ ಮಗ್ಗಗಳಲ್ಲಿ ೫ ೦೩ ಲಕ್ಷ (೪೨ ೩%) ಮಗ್ಗಗಳು ಮಾತ್ರ ಚಾಲು ಇದ್ದು, ಉಳಿದ ಮಗ್ಗಗಳು ಬಂದು ಬಿದ್ದಿದ್ದವು; ಇಲ್ಲವೆ ಬೇರೆ ವ್ಯವಸ್ಥೆಗಳಲ್ಲಿ ಕೆಲಸ ಮಾಡುತ್ತಿದ್ದವು. ಇದೆ ವರ್ಷದಲ್ಲಿ ಕೇವಲ ೪೪೭೭(೩೫.೬%) ಸಹಕಾರಿ ಸಂಘಗಳು ಲಾಭ ಪಡೆದಿದ್ದರೆ ಉಳಿದೆಲ್ಲ ಸಂಘಗಳು ಹಾನಿಯಿಂದ ಬಳಲುತ್ತಿದ್ದವು.

ಮೇಲಿನ ಅಂಕಿ ಅಂಶಗಳು ಸಹಕಾರಿ ಪದ್ಧತಿಯ ದಾರುಣ ಸ್ಥಿತಿಯ ಸ್ಪಷ್ಟ ಚಿತ್ರವನ್ನು ತೋರಿಸುತ್ತವೆ. ಯೋಜನೆಯಿಂದ ಯೋಜನೆಗೆ ಸಹಕಾರಿ ಪದ್ಧತಿ ಕುಸಿಯುತ್ತಿರುವುದರ ಅಂಶವನ್ನು ಕೆಳಗಿನ ಕೋಷ್ಟಕ ಸೂಚಿಸುತ್ತದೆ.

## ಕೋಷ್ಟಕ

ಯೋಜನೆಯ ಅವಧಿಯಲ್ಲಾದ ಸಹಕಾರಿ ಸಂಘಗಳ ಪ್ರಗತಿ (ಸಾವಿರ ರೂ.ಗಳ ಮೊತ್ತದಲ್ಲಿ)

| ವರ್ಗಗಳ | ದ್ವಿತೀಯ ಯೋಜನೆಯ ಅಂತ್ಯದಲ್ಲಿ | ತೃತೀಯ ಯೋಜನೆಯ ಅಂತ್ಯದಲ್ಲಿ | | | |
|---|---|---|---|---|---|
| | ೧೯೬೦–೬೧ | ೧೯೬೫–೬೬ | ೧೯೬೬–೬೭ | ೧೯೬೭–೬೮ | ೧೯೬೮–೬೯ |
| ಸಂಖ್ಯೆ | ೧೧, ೮೦೩ | ೧೨,೯೪೭ | ೧೨,೭೩೬ | ೧೨,೫೩೪ | ೧೨,೫೬೬ |
| ಸದಸ್ಯತ್ವ | ೧೩,೧೦,೮೦೦ | ೧೩,೧೪,೭೪೬ | ೧೩,೨೬,೯೫೪ | ೧೨,೭೭,೩೫೮ | ೧೨,೮೯,೪೭೩ |
| ಕೊಂಡುಕೊಳ್ಳುವ ಉತ್ಪಾದನೆ | ೩೪,೨೭,೮೪ | ೮,೪೦,೧೩೭ | ೮,೭೧,೨೧೯ | ೮,೬೧,೨೭೨ | ೮,೩೮,೦೨೬ |
| ಮಾರಾಟ | ೩,೬೮,೮೬೧ | ೬,೩೫,೩೪೯ | ೬,೫೦.೪೬೬ | ೫,೯೯,೩೦೩ | ೫,೯೭,೮೧೪ |

ಮೂಲ : R. B. I. Statistical Statement 1968-69

ದ್ವಿತೀಯ ಹಾಗೂ ತೃತೀಯ ಪಂಚವಾರ್ಷಿಕ ಯೋಜನೆಗಳಲ್ಲಿ ಸಂಘಗಳ ಹಾಗೂ ಸದಸ್ಯರ ಸಂಖ್ಯೆಗಳು ಏರಿದವು. ಆದರೆ ಮೂರನೆ ಪಂಚವಾರ್ಷಿಕ ಯೋಜನೆಯ ನಂತರ ಈ ಸಂಖ್ಯೆಗಳು ಕಡಿಮೆಯಾಗುತ್ತಿರುವುದನ್ನು ಗಮನಿಸಬಹುದು. ಉತ್ಪಾದನೆ ಹಾಗೂ ಮಾರಾಟಗಳು ಕುಸಿಯುತ್ತಿವೆ. ನೇಕಾರರ ಕೈಮಗ್ಗದ ಸಹಕಾರಿ ಸಂಘಗಳ ವರದಿ ಹಾಗೂ ಸಾಲ ಮತ್ತು ಜಿಂದಗಿ ಇವುಗಳ ವಿವರವನ್ನು ಕೂಲಂಕಷವಾಗಿ ಪರಿಶೀಲಿಸಿದರೆ, ದೇಶದಲ್ಲಿಯ ಬಹು ಸಂಖ್ಯೆ ಸಹಕಾರಿ ಸಂಘಗಳು ಕೊರತೆಯಲ್ಲಿವೆ ಎನ್ನುವದು ಖಚಿತವಾಗುತ್ತದೆ.

ಉದಾಹರಣೆಗಾಗಿ ವಿಜಾಪುರ ಜಿಲ್ಲೆಯ ಕೈಮಗ್ಗದ ಉದ್ದಿಮೆಯಲ್ಲಿಯ ಸಹಕಾರಿ ಸಂಘಗಳ ಅಭ್ಯಾಸ ಮೇಲಿನ ಅಂಕಿ ಅಂಶಗಳನ್ನು ಸಮರ್ಥಿಸುತ್ತದೆ. ಈ ಜಿಲ್ಹೆಯಲ್ಲಿ ಕೇವಲ ಬೆರಳ ಮೇಲೆ ಎಣಿಸುವಷ್ಟು ಸಹಕಾರಿ ಸಂಘಗಳು ಉತ್ತಮ ಸ್ಥಿತಿಯಲ್ಲಿದ್ದು ಉಳಿದ ಬಹುಸಂಖ್ಯೆ ಸಹಕಾರಿ ಸಂಘಗಳು ಮುಚ್ಚಿವೆ. ಇಲ್ಲವೆ ಮುಚ್ಚುವ ಸ್ಥಿತಿಯಲ್ಲಿವೆ. ಶೇಕಡಾ ೫೦ ಕ್ಕಿಂತಲೂ ಹೆಚ್ಚು ಸಂಘಗಳು ಮುಚ್ಚಲ್ಪಟ್ಟಿವೆ. ಸಧ್ಯ ಚಾಲೂ ಸ್ಥಿತಿಯಲ್ಲಿದ್ದ ಎಷ್ಟೋ ಸಂಘಗಳು ಕಾಗದ ಮೇಲಿನ ಸಂಘಗಳಾಗಿವೆ. ಈ ಜಿಲ್ಹೆಯ ಇಲಕಲ್ಲ ಮತ್ತು ಸುಳೇಭಾವಿಗಳಲ್ಲಿ ಸಹಕಾರಿ ಸಂಘಗಳ ಸ್ಥಿತಿ ಸಮಾಧಾನಕರವಿತ್ತು. ತೀರ ಇತ್ತೀಚೆಗೆ ಇಲಕಲ್ಲ ಕೈಮಗ್ಗದ ಉದ್ದಿಮೆಯಲ್ಲಿ ಸಹಕಾರಿ ಪದ್ಧತಿ ಗಣನೀಯವಾಗಿ ಕುಸಿಯು

ಹತ್ತಿದೆ. ಆದರೆ ಸುಳೇಭಾವಿಯಲ್ಲಿ ಈ ಪದ್ಧತಿ ಪ್ರಗತಿ ಪಥದಲ್ಲಿದೆ. ಗುಳೇದಗುಡ್ಡ, ರಬಕವಿ, ಬನಹಟ್ಟಿ, ಮಹಾಲಿಂಗಪೂರ, ತೇರದಾಳ, ಗೊಳಸಂಗಿ, ವಂದಾಲ, ನಿಡಗುಂದಿ, ಚಡಚಣ ಮೊದಲಾದ ಕೈಮಗ್ಗದ ಕೇಂದ್ರಗಳಲ್ಲಿ ಸಹಕಾರಿ ಪದ್ಧತಿ ಸ್ವಲ್ಪ ಹೆಚ್ಚು ಕಡಿಮೆ ವಿಫಲವಾಗಿದೆಯೆಂದು ಹೇಳಬಹುದು.

ಅಪ್ರಾಮಾಣಿಕ, ಅದಕ್ಷ ಆಡಳಿತ, ನೇಕಾರರ ಅಸಹಕಾರ, ಪ್ರಭಾವಶಾಲಿ, ಪ್ರಾಮಾಣಿಕ ಮುಂದಾಳುಗಳ ಕೊರತೆ, ಸಾವುಕಾರಿ ಪದ್ಧತಿಯೊಂದಿಗೆ ಸಹಕಾರಿ ಸಂಘಗಳ ಹೊಂದಾಣಿಕೆ ಇಲ್ಲದಿರುವುದು, ಬಂಡವಾಳದ ಕೊರತೆ, ಪರಿಣಿತ ಹಾಗೂ ವ್ಯಾಪಾರಿ ಮನೋವೃತ್ತಿಯುಳ್ಳ ಆಡಳಿತ ವರ್ಗದ ಕೊರತೆ, ಸೇವಾಭಾವದ ಅಭಾವ ಮುಂಧೋರಣೆ ಹಾಗೂ ದೂರದೃಷ್ಟಿಯುಳ್ಳ ಸದಸ್ಯರ ಕೊರತೆ, ನೇಕಾರರ ಕೆಟ್ಟಪ್ರವೃತ್ತಿ, ಸಹಕಾರಿ ಪದ್ಧತಿಗೆ ಬೇಕಾಗುವ ಮನೋಭಾವನೆಯ ಕೊರತೆ ಇವೆ ಮೊದಲಾದವುಗಳು ಸಹಕಾರಿ ಸಂಘಗಳ ಉನ್ನತಿಗೆ ಮಾರಕವಾಗಿ ಪರಿಣಮಿಸಿವೆ. ಈ ಅಂಶಗಳತ್ತ ಸರಕಾರ ಗಮನ ಹರಿಸಿ ಸರಿಯಾದ ಕ್ರಮಗಳನ್ನು ತೀವ್ರ ಕೈಕೊಳ್ಳಬೇಕು.

ಸರಕಾರದ ಕೈಮಗ್ಗದ ಉದ್ದಿಮೆಯು ಅಭಿವೃದ್ಧಿ ಕಾರ್ಯಕ್ರಮಗಳು ಈ ಉದ್ದಿಮೆಯ ಮೇಲೆ ಎಷ್ಟು ಪರಿಣಾಮ ಬೀರಿವೆ, ಅವುಗಳಿಂದ ಈ ಉದ್ದಿಮೆಗೆ ಎಷ್ಟು ಲಾಭವಾಗಿದೆ ಮತ್ತು ಅವುಗಳ ಯಶಸ್ಸು ಎಷ್ಟೆಂಬುದನ್ನು ತಿಳಿಯುವುದು ಅವಶ್ಯ. ಈ ಸಂಬಂಧದಲ್ಲಿ ಭಾರತದ

ಯೋಜನಾ ಆಯೋಗದ ಕಾರ್ಯಕ್ರಮಗಳ ಮೌಲ್ಯ ಮಾಪನ ಘಟಕದ ಕೈಮಗ್ಗದ ಅಭಿವೃದ್ಧಿ ಕಾರ್ಯಕ್ರಮದ ಅಭ್ಯಾಸದಲ್ಲಿರುವ ಕೆಲವು ಮಹತ್ವದ ನಿರ್ಣಯಗಳನ್ನು ಇಲ್ಲಿ ಉಲ್ಲೇಖಿಸಿದರೆ ಸಂದರ್ಭೋಚಿತವಾಗುವುದು. ದೇಶದಲ್ಲಿಯ ಕೈಮಗ್ಗದ ಅಭಿವೃದ್ಧಿಯ ಮೇಲೆ ಸರಕಾರದ ಅಭಿವೃದ್ಧಿ ಕಾರ್ಯಕ್ರಮಗಳು ಎಷ್ಟು ಪರಿಣಾಮ ಬೀರಿವೆ ಮತ್ತು ಪ್ರಸ್ತುತ ಪ್ರಸಂಗದಲ್ಲಿ ಕೈಮಗ್ಗದ ಉದ್ದಿಮೆ ಯಾವ ಸ್ಥಿತಿಯಲ್ಲಿದೆಯೆಂಬುದನ್ನು ಕೂಲಂಕಷವಾಗಿ ತಿಳಿಯಲು ಈ ಅಭ್ಯಾಸವನ್ನು ಕೈಗೆತ್ತಿಕೊಳ್ಳಲಾಯಿತು. ಈ ಘಟಕ ಕೈಮಗ್ಗದ ಉದ್ದಿಮೆಯ ವಿವಿಧ ಅಂಗಗಳನ್ನು ವಿವರವಾಗಿ ಅಭ್ಯಸಿಸಿ ಕೆಲವು ಮಹತ್ವದ ನಿರ್ಣಯಕ್ಕೆ ಬಂದಿದೆ. ಈ ನಿರ್ಣಯಗಳ ವಿವರ ಇಲ್ಲಿ ಕೊಡಲಾಗಿದೆ.

ಗ್ರಾಮಾಂತರ ಪ್ರದೇಶಗಳಲ್ಲಿ ಸಹಕಾರಿ ಸಂಘಗಳ ಸಂಖ್ಯೆ ಹೆಚ್ಚಿದಂತೆ ನಗರ ಪ್ರದೇಶಗಳಲ್ಲಿ ಲೋಖಂಡಾ ಅಥವಾ ಸ್ವತಂತ್ರ ನೇಕಾರರ ಸಂಖ್ಯೆ ಹೆಚ್ಚಾಗಿರುತ್ತದೆ. ೨/೩ರಷ್ಟು ಹಳ್ಳಿಗಳ ನೇಕಾರರು ಸಹಕಾರಿ ಸಂಘಗಳ ಸದಸ್ಯರಾಗಿದ್ದರೆ, ಕೇವಲ ೧/೫ಕ್ಕಿಂತಲೂ ಕಡಿಮೆ ಪ್ರಮಾಣದ ಪಟ್ಟಣದ ನೇಕಾರರು ಸಹಕಾರಿ ಕ್ಷೇತ್ರದ ಸದಸ್ಯರಾಗಿದ್ದಾರೆ.

ಅತ್ಯಂತ ಹೆಚ್ಚಿನ ಆದಾಯವನ್ನು ಪಡೆಯಲು ಒಂದು ವ್ಯವಸ್ಥೆಯಲ್ಲಿ ಕೆಲಸಮಾಡುತ್ತಿರುವ ನೇಕಾರ ಇನ್ನುಳಿದ ವ್ಯವಸ್ಥೆಗಳೊಂದಿಗೂ ಸಂಬಂಧವನ್ನು ಇರಿಸಿಕೊಂಡಿದ್ದಾನೆ. ನೇಕಾರರ ಸಹಕಾರಿ ಸಂಘಗಳ ಒಟ್ಟು ಸದಸ್ಯರಲ್ಲಿ ಶೇ. ೬೩

ರಷ್ಟು ನೇಕಾರರು ಸಹಕಾರಿ ಸಂಘಗಳನ್ನು ತ್ಯಜಿಸಿ ಬೇರೆ ವ್ಯವಸ್ಥೆಯಲ್ಲಿ ಕೆಲಸಕ್ಕೆ ತೊಡಗಿದ್ದಾರೆ. ಇದಕ್ಕೆ ಮೂಲ ಕಾರಣ ಸಂಘಗಳ ಆಡಳಿತದ ಅದಕ್ಷತೆ ಹಾಗೂ ಕಚ್ಚಾ ಮಾಲುಗಳ ಸರಿಯಾದ ಪೂರೈಕೆಯಾಗದಿರುವದು.

ಶ್ರಮವನ್ನು ಕಡಿಮೆಮಾಡಲು ಕೈಮಗ್ಗಗಳ ಬದ ಲಾಗಿ ಫಟಲ್ ಮಗ್ಗಗಳನ್ನು ಉಪಯೋಗಿಸಲಾಗುತ್ತದೆ. ಆದರೆ ದೇಶದ ಎಲ್ಲ ಕೇಂದ್ರಗಳಲ್ಲಿ ಫಟಲ್‌ಗಳನ್ನೇ ಉಪ ಯೋಗಿಸಲಾಗಿಲ್ಲ. ವಿವಿಧ ಕೇಂದ್ರಗಳಲ್ಲಿ ಬೇರೆ ಬೇರೆ ಪ್ರಕಾ ರದ ಮಗ್ಗಗಳು ಪ್ರಚಾರದಲ್ಲಿವೆ. ಮಿದ್ನಾಪೂರ ಭಾಗದಲ್ಲಿ ಫ್ರೇಮಲೂಮಗಳನ್ನು ಹೆಚ್ಚಾಗಿ ಬಳಸುತ್ತಿದ್ದರೆ ಉಳಿದ ಭಾಗಗಳಲ್ಲಿ ಸರ್ವಸಾಮಾನ್ಯವಾಗಿ ಫಟಲ್ ಮಗ್ಗಗಳನ್ನೇ ಉಪಯೋಗಿಸುತ್ತಾರೆ. ದಕ್ಷಿಣ ಭಾರತದ ಕೈಮಗ್ಗದ ಕೇಂದ್ರಗಳಲ್ಲಿ ಫ್ರೆಮಲೂಮಗಳ ಪ್ರಚಾರ ಕಡಿಮೆಯಾಗಿವೆ ಮತ್ತು ಪ್ರಚಾರವಿದ್ದಲ್ಲಿ ಅವುಗಳನ್ನು ಬಳಸಲಿಕ್ಕೆ ಸ್ಥಳದ ತೊಂದರೆ ಇರುತ್ತದೆ. ನೇಕಾರರ ಫಟಲ್ ಮಗ್ಗಗಳ ಮನೆ ಗಳು ಫ್ರೇಮಲೂಮಗಳನ್ನು ಸ್ಥಾಪಿಸಲು ಸಾಲುವದಿಲ್ಲ ವೆಂದು ತಿಳಿದುಬರುತ್ತದೆ.

ಅಧಿಕಾರಿಗಳ ಪ್ರೋತ್ಸಾಹದಿಂದಲೇ ಎಲ್ಲ ಸಹಕಾರಿ ಸಂಘಗಳು ಸ್ಥಾಪಿತವಾಗಿಲ್ಲ. ೪೮ ಸ್ಯಾಂಪಲ್ ಸಂಘಗಳ ಪೈಕಿ ೯ ಸಂಘಗಳು ಮಾತ್ರ ಅಧಿಕಾರಿಗಳ ಪ್ರೋತ್ಸಾಹದಿಂದ ಸ್ಥಾಪಿಸಲ್ಪಟ್ಟಿವೆ. ೨೩ ಸಂಘಗಳು ಖಾಸಗಿ ವ್ಯಕ್ತಿಗಳಿಂದ ಸ್ಥಾಪಿಸಲ್ಪಟ್ಟಿವೆ. ಉಳಿದ ೧೬ ಸಂಘಗಳು ಖಾಸಗಿ ವ್ಯಕ್ತಿ

ಗಳ ಹಾಗೂ ಸರಕಾರಿ ಅಧಿಕಾರಿಗಳ ಪ್ರೋತ್ಸಾಹದಿಂದ ತೆರೆದಿವೆ.

ಸ್ಯಾಂಪಲ್ ಸಹಕಾರಿ ಸಂಘಗಳಲ್ಲಿದ್ದ ಒಟ್ಟು ೨೫೦ ಮಗ್ಗಗಳಲ್ಲಿ ೬೨೦ ಮಗ್ಗಗಳು ಬಂದು ಬಿದ್ದಿದ್ದವು. ಇದಕ್ಕೆ ಕೆಲಸದಲ್ಲಿಯ ಅಡೆತಡೆಗಳು, ಸಲಕರಣೆಗಳನ್ನು ದುರಸ್ತು ಮಾಡುವ ವ್ಯವಸ್ಥೆ ಇಲ್ಲದಿರುವುದು, ಬೇಡಿಕೆಯ ಮತ್ತು ನೂಲಿನ ಕೊರತೆಗಳು ಇವು ಮುಖ್ಯ ಕಾರಣಗಳಾಗಿವೆ.

ಅಪೆಕ್ಸ ಸಹಕಾರಿ ಸಂಘ ಹಾಗೂ ಸಹಕಾರಿ ನೂಲಿನ ಗಿರಣಿಗಳು ಕೈಮಗ್ಗದ ಪ್ರಾಥಮಿಕ ಸಂಘಗಳಿಗೆ ಸಾಕಷ್ಟು ನೂಲಿನ ಪೂರೈಕೆಯನ್ನು ಮಾಡಲು ಅಸಮರ್ಥವಾಗಿದ್ದ ರಿಂದ ನೂಲಿನ ಮಾರುಕಟ್ಟೆಗೆ ಮೊರೆ ಹೋಗಬೇಕಾಯಿತು. ಇತ್ತೀಚಿಗೆ ಜಿನುಗು ನೂಲಿಗೆ ಮತ್ತು ಕೃತಕ ರೇಷ್ಮೆಗೆ ನೇಕಾ ರರ ಕೇಂದ್ರಗಳಿಂದ ಬೇಡಿಕೆ ಹೆಚ್ಚಾಗಿವೆ.

ಸಹಕಾರಿ ಸಂಘಗಳ ಕಾರ್ಖಾನೆಯಲ್ಲಿ ಸುಧಾರಿಸಿದ ಸಲಕರಣೆಗಳನ್ನು ಉಪಯೋಗಿಸುತ್ತಿಲ್ಲ. ಇದಕ್ಕೆ ಮುಖ್ಯ ಕಾರಣಗಳು ೧) ಸಲಕರಣೆಗಳ ಅಸಮಂಜಸತೆ (Unsuitability) ೨) ನೇಕಾರರ ಕುಶಲತೆಯ ಕೊರತೆ.

ಗಮನಿಸಬೇಕಾದ ಮುಖ್ಯ ವಿಷಯವೆಂದರೆ ಸುಧಾ ರಿಸಿದ ಮಗ್ಗಗಳನ್ನು ಹಾಗೂ ಸಲಕರಣೆಗಳನ್ನು ನೇಕಾರರು ಹೊಂದದೆ ಇರುವುದಕ್ಕೆ ಮೂಲಕಾರಣಗಳು ಇಂತಿವೆ–

೧) ನೇಕಾರನಿಗೆ ಸುಧಾರಿಸಿದ ಸಾಮಾನುಗಳ ಮಾಹಿತಿ ಇಲ್ಲದಿರುವುದು. ೨) ಕೆಲವು ಕೇಂದ್ರಗಳಿಗೆ ಅವುಗಳ ಅಸಮಂಜಸತೆ ೩) ಅವುಗಳನ್ನು ಕೊಳ್ಳಲು ಬೇಕಾಗುವ ಬಂಡವಾಳದ ಕೊರತೆ ಉ:-ಕೆಲವು ಕೇಂದ್ರಗಳಲ್ಲಿ ನೆಯ್ಯುತ್ತಿರುವ ಬಟ್ಟೆಯ ನಮೂನೆಯನ್ನು ಕೆಲವು ಸುಧಾರಿತ ಮಗ್ಗಗಳಿಂದ ನೆಯುವುದು ಅಶಾಧ್ಯ. ವಾರಪಿಂಗ ಯಂತ್ರ ಇಲ್ಲವೆ ಡ್ರಮ್ಮುಗಳನ್ನು ಒಬ್ಬ ನೇಕಾರನು ಹೊಂದುವುದು ಆರ್ಥಿಕ ದೃಷ್ಟಿಯಿಂದ ಹಾನಿಕರ.ಅದರಂತೆ ಆಧುನಿಕ ಬಣ್ಣದ ಮನೆಗಳ ರಚನೆ.

ಸಹಕಾರಿ ಕ್ಷೇತ್ರದಲ್ಲಿರುವ ಒಟ್ಟು ನೇಕಾರ-ಸದಸ್ಯರಲ್ಲಿ ಶೇ.೮೦ ರಷ್ಟು ನೇಕಾರರಿಗೆ ಕೆಲವು ಹೊಸ ನಮೂನೆಯ ಬಟ್ಟೆಗಳನ್ನು ನೆಯ್ಯಲು ಬರುವುದಿಲ್ಲ. ಕಾರಣ ೧) ಈಗಿದ್ದ ಮಗ್ಗಗಳ ಮೇಲೆ ಅವುಗಳನ್ನು ತಯಾರಿಸಲು ಬರುವುದಿಲ್ಲ. ೨) ನೇಕಾರನಿಗೆ ಅಂಥ ವಸ್ತ್ರಗಳನ್ನು ನೆಯ್ಯುವ ಕುಶಲತೆ ಇಲ್ಲ.

ಗಾಡಗಳು(Dobbies) ಜಾಕಾರ್ಡ ಮತ್ತು ವಾರ್ನಿಷ್ಟ ವಾಯಾರ್ ಹೀಲ್ಡ್ಸ್(Jacquards and warnished wire healds) ಇವೆ ಸಲಕರಣೆಗಳನ್ನು ಕೆಲವು ಕೇಂದ್ರಗಳಲ್ಲಿ ಸ್ವೀಕರಿಸಲಾಗಿದೆ. ಆದರೆ ಬಹುಸಂಖ್ಯೆ ಕೇಂದ್ರಗಳಲ್ಲಿ ಇವುಗಳನ್ನು ಸ್ವೀಕರಿಸಲಾರದ್ದಕ್ಕೆ ಮುಖ್ಯಕಾರಣಗಳೆಂದರೆ ಇವುಗಳ ಬಗೆಗೆ ಅಜ್ಞಾನ ಕೊಂಡುಕೊಳ್ಳುವ ಅಸಮರ್ಥತೆ. ಆರ್ಥಿಕ ದೃಷ್ಟಿಯಿಂದ ಈ ಸಲಕರಣೆಗಳ ಅಸಮಂಜಸತೆ

ಅನಾವಶ್ಯಕತೆ ಹಾಗೂ ಅವುಗಳ ಪ್ರಚಾರ ಸಾಕಷ್ಟು ಪ್ರಮಾಣ ದಲ್ಲಿ ಆಗದಿರುವುದು. ಮೇಲೆ ವಿವರಿಸಿದ ಕೆಲವು ಸುಧಾರಿಸಿದ ಸಲಕರಣೆಗಳನ್ನುಳಿದು ಇನ್ನಾವ ಸಲಕರಣೆಗಳನ್ನೂ ಕೈಮಗ್ಗದ ಕೇಂದ್ರಗಳು ಉಪಯೋಗಿಸುತ್ತಿಲ್ಲ.

ಕೆಲವು ತರಬೇತಿ ಕೇಂದ್ರಗಳಲ್ಲಿ ಸೌಕರ್ಯಗಳು ಸಾಕಷ್ಟು ಪ್ರಮಾಣದಲ್ಲಿ ಇರಲಿಲ್ಲ. ಈ ಕೇಂದ್ರಗಳ ಮುಖ್ಯ ಕೊರತೆಯೆಂದರೆ ತರಬೇತಿ ಪಡೆದ ನಂತರ, ಸುಧಾರಿಸಿದ ಸಲಕರಣೆಗಳನ್ನು ನೇಕಾರರಲ್ಲಿ ಹಂಚುವ ವ್ಯವಸ್ಥೆ ಇಲ್ಲದಿರುವುದು. ಇದಲ್ಲದೆ, ಮುಂದೆ ಅನುಸರಿಸುವ ಕ್ರಮಗಳು ಹಾಗೂ ತರಬೇತಿ ಹೊಂದಿದವರ ಸಲುವಾಗಿ ಕೊಡಬೇಕಾದ ಅನುಕೂಲತೆಗಳ ನಿಶ್ಚಿತ ಯೋಜನೆ ಇಲ್ಲದಿರುವುದರಿಂದ ತರಬೇತಿ ಕೇಂದ್ರಗಳಿಂದ ತಕ್ಕ ಫಲ ದೊರಕಿಲ್ಲ. ಇದರಿಂದಾಗಿ ನೇಕಾರರೂ ಆಸಕ್ತಿವಹಿಸುತ್ತಿಲ್ಲ.

ತರಬೇತಿಗಾಗಿ ನೇಕಾರರನ್ನು ಕಳುಹಿಸುವ ಕಾರ್ಯ ತ್ವರಿತಗತಿಯಲ್ಲಿ ಆಗುತ್ತಿದ್ದಿಲ್ಲ. ಸುಧಾರಿಸಿದ ನೆಯ್ಯುವ ಪದ್ಧತಿಯಲ್ಲಿ ತರಬೇತಿ ಹೊಂದುವುದರಲ್ಲಿ ಎಷ್ಟೋ ನೇಕಾರರು ಆಸಕ್ತರಾಗಿರಲಿಲ್ಲವಾದರೆ ಬಹುಜನ ನೇಕಾರರಿಗೆ ತರಬೇತಿಯ ಅನುಕೂಲತೆಗಳು ಇರುತ್ತವೆಯೆಂಬುದೇ ತಿಳಿದಿರಲಿಲ್ಲ.

ನೇಕಾರನಿಗೆ ನೂಲನ್ನು ಕೊಂಡುಕೊಳ್ಳುವ ಶಕ್ತಿಯಿಲ್ಲದ್ದರಿಂದ ಅವನ ಉದ್ದಿಮೆ ತುಂಬ ತೊಂದರೆಗೀಡಾಗಿದೆ. ಗ್ರಾಮಾಂತರ ಪ್ರದೇಶಗಳಿಗೆ ನೂಲಿನ ಪೂರೈಕೆ

ನಿಯಮಿತವಾಗಿ ಆಗುವುದಿಲ್ಲವಾದ್ದರಿಂದ, ನವೀನ ಸುಧಾರಿಸಿದ ಸಲಕರಣೆಗಳ ಬಳಕೆ ಇಲ್ಲದ್ದರಿಂದ ಮತ್ತು ತರಬೇತಿ ಪಡೆದ ನೇಕಾರರ ಸಂಖ್ಯೆ ಕಡಿಮೆ ಇರುವುದರಿಂದ ಮಗ್ಗದ ಸರಾಸರಿ ಉತ್ಪತ್ತಿ ಹಳ್ಳಿಯಲ್ಲಿ ನಗರಕ್ಕಿಂತಲೂ ಕಡಿಮೆ ಇರುವುದು.

೧೯೫೬-೫೭ ಮತ್ತು ೧೯೬೧-೬೨ರಲ್ಲಿ ಅನುಕ್ರಮವಾಗಿ ಪ್ರತಿ ಮಗ್ಗಕ್ಕೆ ೧,೭೯೦ರೂ. ಮತ್ತು ೨,೧೨೫ರೂ. ಒಟ್ಟು ಲಾಭವಾಯಿತು. ಹಾಗೂ ತಕ್ಕ ಖರ್ಚುಗಳು ೧,೧೬೧ ರೂ. ಮತ್ತು ೧,೨೮೧ ರೂ. ಹೀಗಾಗಿ ನಿವ್ವಳ ಆದಾಯ ಪ್ರತಿಮಗ್ಗಕ್ಕೆ ೬೩೯ ರೂಪಾಯಿಯಿಂದ(೧೯೫೬-೫೭)೮೪೪ ರೂಪಾಯಿಗಳಿಗೆ (೧೯೬೧-೬೨)ರಲ್ಲಿ ಏರಿತು. ಆದರೆ ಪ್ರತಿ ನೇಕಾರನ ಸರಾಸರಿ ಆದಾಯ ಕಡಿಮೆ ಪ್ರಮಾಣದಲ್ಲಿಯೇ ಇದೆ. ನೇಕಾರನ ತಲಾ ಆದಾಯ ಭಾರತದ ಕುಟುಂಬಸ್ಥ ವ್ಯಕ್ತಿಯ ಸರಾಸರಿ ಆದಾಯಕ್ಕಿಂತಲೂ (ಸರಾಸರಿ ಆದಾಯ ರೂ. ೧೫೦೦)ಕಡಿಮೆ ಇರುವದು. ಜರಬಂಡವಾಳದ ಕೊರತೆಯಿರುವುದರಿಂದ ಸಹಕಾರಿ ಸಂಘಗಳಿಗೆ ಇಂದಿಗೂ ಕಚ್ಚಾಮಾಲುಗಳ ಸಂಗ್ರಹಣೆ ಮಾಡುವ ಸಾಮರ್ಥ್ಯ ಬಂದಿಲ್ಲ. ಪ್ರತಿದಿನದ ಕಚ್ಚಾಮಾಲುಗಳ ಪೂರೈಕೆ ಮಾಡಲು ದಿನಂಪ್ರತಿ ಪೇಟೆಯಿಂದ ಕೊಂಡುಕೊಳ್ಳಲಾಗುತ್ತಿತ್ತು.

ಪ್ರಾಥಮಿಕ ಮತ್ತು ಅಪೆಕ್ಸ ಸಂಘಗಳ ಸಂಬಂಧ ಸರಿಯಾಗಿರದಿರುವುದೇ ಮಾರಾಟ ವ್ಯವಸ್ಥೆಯಲ್ಲಿಯ ದೊಡ್ಡ ಕೊರತೆಗೆ ಕಾರಣವಾಗಿದೆ. ಉತ್ಪಾದಿಸಲ್ಪಟ್ಟ ಮಾಲು

ಬೇಗನೆ ಮಾರಾಟವಾಗದಿರುವುದಕ್ಕೆ ಇರುವ ಅನೇಕ ಕಾರಣಗಳಲ್ಲಿ ಮುಖ್ಯವಾದುವುಗಳು ಇಂತಿವೆ. ೧) ಹೊಸ ಹೊಸ ನಮೂನೆಗಳಲ್ಲದಿರುವುದು ೨) ಸುಸಂಘಟಿತ ಉತ್ಪಾದನೆ ಮತ್ತು ಮಾರಾಟ ವ್ಯವಸ್ಥೆ ಇಲ್ಲದಿರುವುದು ೩) ಮಾರಾಟದ ಖರ್ಚನ್ನು ಪೂರೈಸಲು ಬೇಕಾಗುವ ಬಂಡವಾಳದ ಕೊರತೆ.

ಈ ಎಲ್ಲ ನಿರ್ಣಯಗಳಿಂದ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಸರಕಾರದ ಅಭಿವೃದ್ಧಿ ಕ್ರಮಗಳಿಂದ ಕೈಮಗ್ಗದ ಉದ್ದಿಮೆಯ ಮೇಲೆ ಹೆಚ್ಚಿನ ಪರಿಣಾಮವೇನೂ ಆಗಿರುವುದಿಲ್ಲ. ಎಂದಿನಂತೆ ಇಂದೂ ಅನೇಕ ಸಮಸ್ಯೆಗಳು ಈ ಉದ್ದಿಮೆಯನ್ನು ಕಾಡುತ್ತವೆ. ಅದಕ್ಷ ಹಾಗೂ ಅಪ್ರಾಮಾಣಿಕ ಆಡಳಿತವರ್ಗ, ನೇಕಾರರ ಅನಾದರ, ಅನಾಸಕ್ತಿ, ಮುಂದಾಳುವಿನ ಕೊರತೆ ಹಾಗೂ ಅವರಲ್ಲಿರುವ ತಪ್ಪು ಧೋರಣೆಗಳು ಇವೇ ಮೊದಲಾದ ಆತಂಕಗಳು ಇರುವುದರಿಂದ ಕೈಮಗ್ಗದ ಅಭಿವೃದ್ಧಿ ಸಮಸ್ಯೆ ಇನ್ನೂ ಸಮಸ್ಯೆಯಾಗಿಯೇ ಉಳಿದಿದೆ.

## ೪. ಉಪಸಂಹಾರ ಮತ್ತು ಸೂಚನೆಗಳು

ಆಳಿದುಳಿದ ಭಾರತದ ಬಹುಪುರಾತನ ಕೈಗಾರಿಕೆಗಳ-ಲ್ಲೊಂದಾದ ಕೈಮಗ್ಗದ ಉದ್ದಿಮೆಯನ್ನು ಸಂರಕ್ಷಿಸುವುದು ಹಾಗೂ ಅಭಿವೃದ್ಧಿ ಪಡಿಸುವುದು ಆರ್ಥಿಕ ಮತ್ತು ಸಾಮಾಜಿಕ ದೃಷ್ಟಿಗಳಿಂದ ಸಮರ್ಥನೀಯ. ಅಲ್ಪ ಬಂಡವಾಳದಲ್ಲಿ ಹೆಚ್ಚು ಉತ್ಪಾದನೆ ಮತ್ತು ಉದ್ಯೋಗಾವಕಾಶಗಳನ್ನು ಕಲ್ಪಿಸುವ ಯಾವುದೇ ಕೈಗಾರಿಕೆಯು ಅಭಿವೃದ್ಧಿ ಹೊಂದುತ್ತಿರುವ ಭಾರತದಂತಹ ದೇಶಗಳಿಗೆ ತುಂಬ ಉಪಯುಕ್ತವಾಗಿರುತ್ತದೆ. ಕೈಮಗ್ಗದ ಉದ್ದಿಮೆ ಕಡಿಮೆ ಬಂಡವಾಳದಿಂದ ಹೆಚ್ಚಿನ ಉತ್ಪಾದನೆ ಮತ್ತು ಉದ್ಯೋಗಾವಕಾಶಗಳನ್ನು ನಿರ್ಮಿಸುತ್ತದೆಂಬುದನ್ನು ಈಗಾಗಲೆ ಅನೇಕ ತಜ್ಞರು ತಮ್ಮ ಅಭ್ಯಾಸಗಳ ಆಧಾರದ ಮೇಲಿಂದ ಋಜುವಾತು ಪಡಿಸಿದ್ದಾರೆ.

ದೇಶದಲ್ಲಿರುವ ಒಟ್ಟು ಸುಮಾರು ೩೦ ಲಕ್ಷ ಮಗ್ಗಗಳನ್ನು ಸುಮಾರು ೨½ರಿಂದ ೩ ಕೋಟಿ ಜನ ಅವಲಂಬಿಸಿರುವರು. ಜೀವನದ ಗಂಭೀರ ಪ್ರಶ್ನೆಯನ್ನು ಗಮನಿಸಿ ಈ ಉದ್ದಿಮೆಯ ಸಂರಕ್ಷಣೆ ಹಾಗೂ ಅಭಿವೃದ್ಧಿ ಅತ್ಯಾವಶ್ಯವಾಗಿದೆಯೆಂದು ಹೇಳುವುದು ಅನಿವಾರ್ಯ. ಹನುಮಂತನ ಬಾಲದಂತೆ ಶರವೇಗದಲ್ಲಿ ಬೆಳೆಯುತ್ತಿರುವ ನಿರುದ್ಯೋಗ ಸಮ

ಸ್ಯೆಯು ಸ್ಥಿತಿಯಲ್ಲಿ ಈ ೩ ಕೋಟಿ ನೇಕಾರ ಜನಾಂಗಕ್ಕೆ ಬದಲಿ ಉದ್ಯೋಗ ವ್ಯವಸ್ಥೆಯಂತೂ ಅಸಾಧ್ಯವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಆದ್ದರಿಂದ ಅವರಿಗೆ ವಂಶಪರಂಪರೆಯಿಂದ ಬಂದ ಉದ್ಯೋಗದಲ್ಲಿಯೇ ತೊಡಗುವಂತೆ ಮಾಡಿ ಅವರ ಕಲ್ಯಾಣಕ್ಕಾಗಿ ಸರಕಾರ ಶ್ರಮಿಸಬೇಕಾದುದು ನ್ಯಾಯಸಮ್ಮತ. ಅದು ಅದರ ಧರ್ಮ ಮತ್ತು ಕರ್ತವ್ಯ.

ದೇಶದ ಪ್ರಸ್ತುತ ಪರಿಸ್ಥಿತಿಯಲ್ಲಿ ಕೈಮಗ್ಗದ ಉದ್ದಿಮೆ ಅನೇಕ ಸಮಸ್ಯೆಗಳಿಂದ ಕ್ಷೀಣವಾಗಹತ್ತಿದೆ. ಈ ಸಮಸ್ಯೆಗಳನ್ನು ಗುರುತಿಸದೆ ಅವುಗಳ ಪರಿಹಾರಗಳನ್ನು ಸೂಚಿಸುವದು ಅಸಾಧ್ಯವಾದ್ದರಿಂದ ಮೊದಲು ಸಮಸ್ಯೆಗಳ ವಿವರವನ್ನು ಇಲ್ಲಿ ಕೊಡಲಾಗಿದೆ.

## ಕೈಮಗ್ಗದ ಸಮಸ್ಯೆಗಳು

### ೧. ಸಂಘಟನೆಯ ಕೊರತೆ

ಕೈಮಗ್ಗದ ಉದ್ದಿಮೆಯ ಸಂಘಟನೆಯ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಇಂದಿಗೂ ಕಂಡುಹಿಡಿಯಲಾಗಿಲ್ಲವೆಂಬುವುದು ವಿಷಾದಿಸುವ ಸಂಗತಿ. ಬಹುದಿನಗಳಿಂದ ಉದ್ದಿಮೆ ಈ ಕೊರತೆಯಿಂದ ಬಳಲುತ್ತಿದೆ. ಈ ಉದ್ದಿಮೆಯಲ್ಲಿ ಒಂದು ಇಲ್ಲವೆ ಎರಡು ಮಗ್ಗಗಳ ಕಾರ್ಖಾನೆಗಳೇ ಬಹು ಸಂಖ್ಯೆಯಲ್ಲಿ ಇರುವುದರಿಂದ, ಅವುಗಳನ್ನು ಪರಿಣಾಮಕಾರಿಯಾಗಿ ಸಂಘಟಿಸಿ ಒಂದು ಸುವ್ಯವಸ್ಥಿತ ನಿಯಂತ್ರಣ ಮತ್ತು ನಿಯಮಕ್ಕೊಳಪಡಿಸುವುದು ಅತ್ಯಗತ್ಯ. ಇಲ್ಲವಾದಲ್ಲಿ

ಅವುಗಳ ಸುವ್ಯವಸ್ಥಿತ ಉತ್ಪಾದನೆ ಮತ್ತು ಮಾರಾಟ ತುಂಬಾ ಕಠಿಣ ಸಾಧ್ಯವಾಗುವುದು. ಅವುಗಳ ಅಭಿವೃದ್ಧಿಯು ಸೌಕರ್ಯಗಳನ್ನೊದಗಿಸುವುದು ಅಸಾಧ್ಯವಾಗುತ್ತದೆ. ಈ ಪ್ರಶ್ನೆಯನ್ನು ಕೈಗೆತ್ತಿಕೊಂಡು ಅಭ್ಯಾಸಮಾಡಿ ಬಹುಜನ ತಜ್ಞರು ಹಾಗೂ ಸಮಿತಿಗಳ ಅಧ್ಯಕ್ಷರು ಒಂದೇ ಅಭಿಪ್ರಾಯಕ್ಕೆ ಬಂದಿರುತ್ತಾರೆ. ಕೈಗಾರಿಕಾ ಕೇಂದ್ರಗಳಲ್ಲಿ ಸಹಕಾರಿ ಸಂಘಗಳನ್ನು ಸಂಘಟಿಸಿ, ಸಂಘಟನೆಯ ಸಮಸ್ಯೆಯನ್ನು ಪರಿಹರಿಸಬಹುದೆಂದು ಸೂಚಿಸಿದ್ದಾರೆ. ಆದರೆ ಸಹಕಾರಿ ಪದ್ಧತಿಯ ದಕ್ಷತೆಯನ್ನು ಬಲವಾಗಿ ಪ್ರಶ್ನಿಸಬಹುದಾಗಿದೆ. ಇತ್ತೀಚಿನ ಅನುಭವದಂತೆ ಈ ಪದ್ಧತಿ ದೇಶದ ಬಹು ಸಂಖ್ಯೆ ಕೈಮಗ್ಗದ ಕೇಂದ್ರಗಳಲ್ಲಿ ಕುಸಿಯುತ್ತಿದೆ. ಎಷ್ಟೋ ಕಡೆಗೆ ಸಂಪೂರ್ಣ ವಿಫಲವಾಗಿದೆ, ಕೆಲವು ಕಡೆ ಇದ್ದರೂ ಉದ್ದಿಮೆಗೆ ಅದರಿಂದ ಹೆಚ್ಚಿನ ಲಾಭವಾಗಿಲ್ಲ. ಸಹಕಾರಿ ಸಂಘಗಳು ಇಂದು ಅನೇಕ ತೊಂದರೆಗಳನ್ನೆದುರಿಸುತ್ತಿವೆ. ಒಟ್ಟಾರೆ ಸಹಕಾರಿ ಪದ್ಧತಿ ಕೈಮಗ್ಗದ ಉದ್ದಿಮೆಯಲ್ಲಿ ಅಯಶಸ್ವಿಯಾಗಹತ್ತಿದೆಯೆಂಬುದು ಇತ್ತೀಚಿನ ಅಂಕಿ ಅಂಶಗಳಿಂದ ಕಂಡುಕೊಳ್ಳಬಹುದಾಗಿದೆ.

೨. ಮಾರಾಟದ ಜ್ವಲಂತಸಮಸ್ಯೆ:

ಕೈಮಗ್ಗದ ವಸ್ತುಗಳ ಮಾರಾಟಮಾಡುವುದು ಇಂದಿನ ಜ್ವಲಂತ ಸಮಸ್ಯೆ. ಅನೇಕ ಅಭಿವೃದ್ಧಿ ಕ್ರಮಗಳಿಂದಾಗಿ ಈ ಉದ್ದಿಮೆಯ ಉತ್ಪಾದನೆಯ ಅಂಗ ಸುಧಾರಿಸಿಕೊಂಡಿದೆ. ಆದರೆ ಇದರ ಮಾರಾಟ ಅಂಗದ ಸಮಸ್ಯೆಗಳು

ಮಾತ್ರ ಉಲ್ಬಣಗೊಳ್ಳುತ್ತಿದೆ. ಈ ಸಮಸ್ಯೆಯಿಂದಲೇ ಅನೇಕ ಸಮಸ್ಯೆಗಳು ಹುಟ್ಟಿಕೊಳ್ಳುತ್ತಿವೆ. ಮಾರಾಟ ಮಾಡುವ ತೊಂದರೆಯಿಂದಾಗಿ ಸಹಕಾರಿ ಸಂಘಗಳು ತೃಪ್ತಿಕರವಾಗಿ ಕಾರ್ಯಮಾಡುತ್ತಿಲ್ಲ. ನೇಕಾರರು ಸ್ವತಂತ್ರರಾಗಿ ಉದ್ಯೋಗ ಮಾಡುವದು ಅಸಾಧ್ಯವಾಗಿದೆ. ಕೈಮಗ್ಗದ ಕೇಂದ್ರದ ಬಟ್ಟೆಗಳಿಗೆ ಪರರಾಜ್ಯಗಳಲ್ಲಿ ಮಾರುಕಟ್ಟೆ ಇದ್ದರಂತೂ ಮಾರಾಟದ ಸಮಸ್ಯೆ ಅತಿ ಹೆಚ್ಚಾಗಿ, ಚಿಕ್ಕ ಪುಟ್ಟ ಸ್ವತಂತ್ರ ನೇಕಾರರು ಮತ್ತು ನೇಕಾರರ ಸಹಕಾರಿ ಸಂಘಗಳು ತಮ್ಮ ಅಸ್ತಿತ್ವವನ್ನೇ ಉಳಿಸಿಕೊಳ್ಳುವುದು ಕಠಿಣವಾಗುತ್ತದೆ. ಇಂಥ ಮಾರುಕಟ್ಟೆ ಹೊಂದಿದ ಕೇಂದ್ರಗಳಲ್ಲಿ ನೇಕಾರರು ಹಾಗೂ ಸಂಘಗಳು ಹೆಚ್ಚು ಬಂಡವಾಳ ಮತ್ತು ಅನುಭವವನ್ನು ಪಡೆದಿರಬೇಕಾಗುತ್ತದೆ. ಮಾರಾಟವಾಗದಿದ್ದಲ್ಲಿ ಬಹಳ ದಿನಗಳವರೆಗೆ ಸಂಗ್ರಹವನ್ನು ಉಳಿಸಿಕೊಂಡು ಬರಬೇಕಾಗುತ್ತದೆ. ಉದ್ದರಿಯ ಮೇಲೆ ಮಾರಾಟ ಮಾಡಬೇಕಾಗುತ್ತದೆ. ಬಾಹ್ಯ ಮಾರುಕಟ್ಟೆಗಳ ಸರಿಯಾದ ಅನುಭವವೂ ಬೇಕಾಗುತ್ತದೆ. ಆದರೆ ಸಹಕಾರಿ ಸಂಘಗಳು ಮತ್ತು ಚಿಕ್ಕ ಪುಟ್ಟ ಸ್ವತಂತ್ರ ನೇಕಾರರ ಬಾಹ್ಯಮಾರುಕಟ್ಟೆಗೆ ಬೇಕಾಗುವ ಬಂಡವಾಳವನ್ನು ಮತ್ತು ಅನುಭವವನ್ನು ಪಡೆಯಲು ಅಸಮರ್ಥರಾಗುತ್ತಾರೆ. ಆದ್ದರಿಂದ ಅವರು ಸಾಹುಕಾರರ ವ್ಯಾಪಾರಿಗಳನ್ನು ಮೊರೆಹೋಗಬೇಕಾಗುತ್ತದೆ. ತತ್ಫಲವಾಗಿ ಮಧ್ಯಸ್ಥರ ಸಂಖ್ಯೆ ಹೆಚ್ಚಿ ಬಟ್ಟೆಗಳ ಬೆಲೆಗಳು ಏರುತ್ತವೆ. ನೇಕಾರರಿಗೆ ಉತ್ಪಾದನೆಯಲ್ಲಿ ಆಸಕ್ತಿ ಇರುವುದಿಲ್ಲ. ಏಕೆಂದರೆ, ಅವರು

ಲಾಭವನ್ನು ಪಡೆಯುವುದಿಲ್ಲ ಹಾಗೂ ಅವರ ಮತ್ತು ಗಿರಾಕಿ ಗಳ ಮಧ್ಯೆ ಯಾವ ಸಂಬಂಧವೂ ಇರುವುದಿಲ್ಲ. ಇದರಿಂದ ವಸ್ತುಗಳ ಗುಣಮಟ್ಟವೂ ಕಡಿಮೆಯಾಗುತ್ತದೆ. ಆದ್ದರಿಂದ ಮಾರಾಟದ ಸಮಸ್ಯೆಗೆ ಆದ್ಯಗಮನವೀಯುವುದು ಅನಿ ವಾರ್ಯ. ಈ ಸಮಸ್ಯೆಯ ಪರಿಹಾರಕ್ಕೆ ಸಹಕಾರಿ ಸಂಘ ಗಳನ್ನೇ ನೆಚ್ಚುವದು ಅಸಮರ್ಥನೀಯ, ಏಕೆಂದರೆ ಅವು ತಾವು ಉತ್ಪಾದಿಸಿದ ಮಾಲನ್ನೇ ಮಾರಾಟ ಮಾಡಲು ಅಸ ಮರ್ಥವಾಗಿ ಸಾಹುಕಾರ ವ್ಯಾಪಾರಿಗಳನ್ನು ಅವಲಂಬಿಸುತ್ತಿವೆ. ಇಲ್ಲಿಯವರೆಗೆ ಸರಕಾರ ಕೈಮಗ್ಗದ ಉದ್ದಿಮೆಯ ಉತ್ಪಾ ದನೆಗೆ ಹೆಚ್ಚು ಲಕ್ಷ್ಯವಹಿಸಿ ಮಾರಾಟದ ಕಡೆಗೆ ಗಮನ ಹರಿಸಿ ದಂತೆ ಕಾಣುತ್ತದೆ. ಇಂದು ಮಾರಾಟದ ಸಮಸ್ಯೆಯ ಪರಿಹಾರಕ್ಕೆ ಪ್ರಥಮಸ್ಥಾನ ಕೊಡಬೇಕು.

**೩. ಶರವೇಗದಲ್ಲಿ ಬೆಳೆಯುತ್ತಿರುವ ಕಚ್ಚಾ ವಸ್ತುಗಳ ಬೆಲೆಗಳು**

ಬಟ್ಟೆಗಳ ಗುಣಮಟ್ಟದ ಸ್ಪರ್ಧೆಯಲ್ಲಿ ಕೈಮಗ್ಗದ ಉದ್ದಿಮೆ ಹಿಂದೆಬಿದ್ದಂತೆ ಕಚ್ಚಾಸರಕುಗಳ ಬೆಲೆಗಳ ನಾಗಾ ಲೋಟದಿಂದಾಗಿ ಬಟ್ಟೆಗಳ ಬೆಲೆಯ ಸ್ಪರ್ಧೆಯಲ್ಲಿಯೂ ಬಹು ಹಿಂದೆ ಬಿದ್ದಿದೆ. ಈ ಉದ್ದಿಮೆಯ ಉತ್ಪಾದನಾ ಖರ್ಚಿನಲ್ಲಿ ಕಚ್ಚಾಮಾಲಿನ ಖರ್ಚು ಅತಿಮುಖ್ಯ. ತತ್ಪರಿಣಾಮ ವಾಗಿ ಕಚ್ಚಾ ಮಾಲಿನ ಬೆಲೆ ಹೆಚ್ಚಾದರೆ, ಅದೇ ಪ್ರಮಾಣ ದಲ್ಲಿ ಬಟ್ಟೆಯ ಬೆಲೆಗಳಲ್ಲಿ ಹೆಚ್ಚಳವಾಗಬೇಕಾಗುತ್ತಿದೆ. ಇದರಿಂದಾಗಿ ಸ್ಪರ್ಧಾತ್ಮಕ ಶಕ್ತಿ ಕುಗ್ಗುತ್ತದೆ; ಬೇಡಿಕೆ ಇಳಿಯುತ್ತದೆ, ನಿರುದ್ಯೋಗ ಸಮಸ್ಯೆ ಹೆಚ್ಚುತ್ತದೆ. ಆದ್ದರಿಂದ

ಕಚ್ಚಾಸರಕುಗಳು ಈ ಉದ್ದಿಮೆಗೆ ಯೋಗ್ಯದರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪೂರೈಕೆಯಾಗುವಂತೆ ಪ್ರಯತ್ನಿಸಬೇಕು. ಸದ್ಯದ ಕಚ್ಚಾ ಮಾಲುಗಳನ್ನು ಪೂರೈಸುವ ವ್ಯವಸ್ಥೆಯಿಂದ ಕೈಮಗ್ಗದ ಕೇಂದ್ರಗಳು ಸಾಕಷ್ಟು ಕಚ್ಚಾಮಾಲನ್ನು ಯೋಗ್ಯದರಕ್ಕೆ ಪಡೆಯುತ್ತಿಲ್ಲ. ನೂಲಿನ ಮಾರುಕಟ್ಟೆಯಲ್ಲಿ ಮಧ್ಯಸ್ಥ ವ್ಯಾಪಾರಿಗಳು ಇನ್ನೂ ಕಡಿಮೆಯಾಗಿಲ್ಲ. ಇವುಗಳನ್ನು ಪಡೆಯಲು ಸಹಕಾರಿ ಸಂಘಗಳು ಹಾಗೂ ಸ್ವತಂತ್ರ ನೇಕಾರರು ವ್ಯಾಪಾರಿಗಳನ್ನೇ ಮೊರೆ ಹೋಗುತ್ತಾರೆ. ಸಹಕಾರಿ ನೂಲಿನ ಗಿರಣಿಗಳನ್ನು ಸಾಕಷ್ಟು ಸ್ಥಾಪಿಸಲಾಗಿಲ್ಲ, ಅವುಗಳನ್ನು ಸ್ಥಾಪಿಸಿದ ಪ್ರದೇಶಗಳಲ್ಲಿ ಗಿರಣಿಗಳ ಅಪ್ರಾಮಾಣಿಕ ಹಾಗೂ ಕಳ್ಳವ್ಯವಹಾರಿಕ ಪ್ರವೃತ್ತಿಯಿಂದಾಗಿ ನೂಲಿನ ಪೂರೈಕೆ ಸರಿಯಾಗಿ ಆಗುತ್ತಿರುವುದಿಲ್ಲ.

**೪. ಉತ್ಪಾದನಾ ಪದ್ಧತಿ ಹಾಗೂ ಸಲಕರಣೆಗಳು**

ದೇಶದಲ್ಲಿಯ ಬಹು ಜನ ನೇಕಾರರು ಹಳೆಯ ಪದ್ಧತಿಯಲ್ಲಿಯೇ ನೆಯುತ್ತಿರುತ್ತಾರೆ. ಅವರು ಉಪಯೋಗಿಸುವ ಸಾಧನ ಸಲಕರಣೆಗಳು ತುಂಬಾ ಹಳೆಯವಿದ್ದು ಅವುಗಳ ಸ್ಥಾನದಲ್ಲಿ ನವೀನ, ಸುಧಾರಿಸಿದ ಸಲಕರಣೆಗಳನ್ನು ಉಪಯೋಗಿಸುವುದು ಅವಶ್ಯವಿದೆ. ಕೈಮಗ್ಗದ ವಸ್ತುಗಳ ಗುಣಮಟ್ಟವನ್ನು ಎತ್ತರಿಸಲು ಹಾಗೂ ಉತ್ಪತ್ತಿಯನ್ನು ಹೆಚ್ಚಿಸಲು ಇವುಗಳನ್ನು ಸ್ವೀಕರಿಸುವುದು ಅನಿವಾರ್ಯವಾಗುತ್ತದೆ. ಆದರೆ ಅವುಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಮಾತ್ರ ವಿಫಲತೆ ಎದ್ದು ಕಾಣುತ್ತದೆ. ಉದಾಹರಣೆಗೆ

ನೇಕಾರರಿಗೆ ಸುಧಾರಿಸಿದ ಮಗ್ಗಗಳನ್ನು ಮತ್ತು ಇನ್ನಿತರ ಸಲಕರಣೆಗಳನ್ನೊದಗಿಸಬೇಕೆಂಬ ಯೋಜನೆ ಬಹುದಿನ ಗಳಿಂದ ಇರುತ್ತದೆ. ಅದಕ್ಕಾಗಿ ಪ್ರತಿಯೋಜನೆಯಲ್ಲಿ ನಿಧಿ ಯನ್ನು ತೆಗೆದಿರಿಸಲಾಗುತ್ತದೆ. ಆದರೆ ಆ ಯೋಜನೆ ಇದೆಯೆಂಬುದು ಹಾಗೂ ಸುಧಾರಿಸಿದ ಸಲಕರಣೆಗಳಿವೆ ಯೆಂಬುದು ಇನ್ನೂ ಅನೇಕ ನೇಕಾರರಿಗೆ ತಿಳಿಯದೆ ಇರು ವುದು ಆಶ್ಚರ್ಯಕರ ಸಂಗತಿ. ಕೆಲವು ಕಡೆ ಗೊತ್ತಿದ್ದರೂ ಅವುಗಳನ್ನು ಸ್ವೀಕರಿಸಲಾಗಿಲ್ಲ. ಆಡಳಿತದ ಅದಕ್ಷತೆ, ನೇಕಾರನ ವಿಶಿಷ್ಟ ಮನೋವೃತ್ತಿ, ಅವನ ಆರ್ಥಿಕ ಅಸಮರ್ಥತೆ ಹಾಗೂ ಸಲಕರಣೆಗಳ ಅಸಮಂಜಸ ಸ್ಥಿತಿಗೆ ಕಾರಣೀಭೂತವಾಗಿವೆ.

ಸುಧಾರಿಸಿದ ಸಲಕರಣೆ ಹಾಗೂ ಉತ್ಪತ್ತಿಯ ದಕ್ಷತೆ ಇವುಗಳಲ್ಲಿ ನೇರ ಸಂಬಂಧ ಇರುತ್ತದೆಯೆಂಬುದನ್ನು ಇಲ್ಲಿ ಗಮನಿಸಬೇಕು. ಹೆಚ್ಚು ಸುಧಾರಿಸಿದ ಸಲಕರಣೆಗಳನ್ನು ನೇಕಾರ ಉಪಯೋಗಿಸಿದಂತೆ ಅವನ ಉತ್ಪಾದನಾ ಸಾಮರ್ಥ್ಯ ಹೆಚ್ಚಿ ಗರಿಷ್ಠ. ಸಮಯದಲ್ಲಿ ಗರಿಷ್ಠ. ಉತ್ಪಾದನೆ ಯನ್ನು ಮಾಡಲು ಸಾಧ್ಯವಿದೆ.

೫. ವಸ್ತುಗಳ ಗುಣಮಟ್ಟ ಕಾಯ್ದುಕೊಂಡುಬರುವುದು

ಕೈಮಗ್ಗದ ವಸ್ತುಗಳ ಗುಣಮಟ್ಟವನ್ನು ಕಾಪಾಡು ವುದು ಗ್ರಾಹಕರಲ್ಲಿ ನಂಬಿಗೆಯನ್ನು ಕುದುರಿಸುವುದಕ್ಕೆ ಅತ್ಯಾವಶ್ಯವಾಗಿದೆ. ಕೈಮಗ್ಗದ ಬಟ್ಟೆ ಜನರನ್ನು ಆಕರ್ಷಿಸದೆ ಇರುವುದಕ್ಕೆ ಇವುಗಳ ಬಾಳಿಕೆ ಕುಗ್ಗುವುದರಿಂದಾಗಿ ಜನರು

ಕೈಮಗ್ಗದ ಬಟ್ಟೆಗಳನ್ನು ಕೊಂಡುಕೊಳ್ಳುವುದಕ್ಕೆ ಕಡಿಮೆ ಮಾಡಿದ್ದಾರೆ.

**೬. ನಮೂನೆಗಳ ಬದಲಾವಣೆ:**

ಅನೇಕ ಕೈಮಗ್ಗದ ಕೇಂದ್ರಗಳಲ್ಲಿ ಬಹು ಪುರಾತನ ಕಾಲದಿಂದ ಬಂದ ನಮೂನೆಗಳನ್ನೆ ನೇಕಾರರು ಉಳಿಸಿ ಕೊಂಡು ಬಂದಿದ್ದಾರೆ. ಈ ನಮೂನೆಗಳಿಂದಾಗಿ ಪ್ರತಿ ವರ್ಷ ಕೈಮಗ್ಗದ ಬಟ್ಟೆಗಳಿಗೆ ಗ್ರಾಹಕರ ಸಂಖ್ಯೆ ಕಡಿಮೆಯಾಗ ಹತ್ತಿದೆ. ಹಳೆಯ ಜನರಷ್ಟೇ ಇವುಗಳನ್ನು ಇಚ್ಛಿಸುತ್ತಾರೆ. ಹೊಸ ಪೀಳಿಗೆ ಹೊಸ ಹೊಸ ನಮೂನೆಗಳನ್ನು ಅಪೇಕ್ಷಿಸು ವುದರಿಂದ, ಹಳೆಯ ಪೀಳಿಗೆ ಕಡಿಮೆಯಾದಂತೆ ಕೈಮಗ್ಗದ ಉತ್ಪಾದನೆಗೆ ಬೇಡಿಕೆ ಕುಗ್ಗುತ್ತ ಹೋಗುತ್ತದೆ. ಆದ್ದರಿಂದ ಹೊಸ ಗ್ರಾಹಕರ ಅಭಿರುಚಿಗೆ ಅನುಗುಣವಾಗಿ ನಮೂನೆ ಗಳನ್ನು ಬದಲಿಸುವುದಿಲ್ಲ. ವ್ಯಾವಹಾರಿಕವೆಂಬುದು ಸ್ಪಷ್ಟವಿದೆ.

ನಮೂನೆಗಳನ್ನು ಬದಲಾಯಿಸುವುದಕ್ಕೆ ಕೆಲವು ಆತಂಕಗಳಿರುವುದು ಕಂಡುಬರುತ್ತದೆ. ಸದ್ಯ ಇದ್ದ ಸಲಕರಣೆ ಗಳು ಮೇಲಿಂದ ಮೇಲೆ ನಮೂನೆಗಳನ್ನು ಬದಲಾಯಿಸಲಿಕ್ಕೆ ಸಹಾಯಕಾರಿಯಾಗಿಲ್ಲ. ನೇಕಾರರು ಹೊಸ ಹೊಸ ನಮೂನೆ ಗಳನ್ನು ನೆಯ್ಯಲು ಅಸಮರ್ಥರಾಗಿದ್ದಾರೆ. ಅವರಿಗೆ ಈ ದಿಶೆ ಯಲ್ಲಿ ಸರಿಯಾದ ತರಬೇತಿ ಇಲ್ಲ. ದೇಶದ ವಿವಿಧ ಭಾಗ ಗಳಲ್ಲಿ ತರಬೇತಿ ಕೇಂದ್ರ ಮತ್ತು ಸಂಶೋಧನಾ ಕೇಂದ್ರ

ಗಳನ್ನು ತೆರೆದಿದ್ದರೂ ಅವುಗಳ ಲಾಭವನ್ನು ನೇಕಾರರು ಪಡೆಯುತ್ತಿಲ್ಲ. ಮತ್ತು ಅವುಗಳ ಇರುವಿಕೆಯ ಬಗೆಗೆ ಎಷ್ಟೋ ನೇಕಾರರಿಗೆ ಗೊತ್ತಿಲ್ಲ. ಈ ತೊಂದರೆಗಳನ್ನು ನಿವಾರಿಸಿ ನೇಕಾರನಿಗೆ ಹೊಸ ಹೊಸ ನಮೂನೆಗಳನ್ನು ನೆಯ್ಯುವಂತೆ ಪ್ರೋತ್ಸಾಹಿಸಬೇಕು.

೭. ಪ್ರಚಾರ: ಇದು ಪ್ರಚಾರಯುಗ. ಪ್ರಚಾರವಿಲ್ಲದೆ ಹೆಚ್ಚು ಮಾರಾಟಮಾಡುವುದು ಸಾಧ್ಯವೇ ಇಲ್ಲ. ಕೈಮಗ್ಗ ಕೇಂದ್ರಗಳಲ್ಲಿಯ ಶ್ರೀಮಂತ ವ್ಯಾಪಾರಿ ನೇಕಾರರಿಗಾಗಲಿ ಇಲ್ಲವೆ ಸಹಕಾರಿ ಸಂಘಗಳಾಗಲಿ ಪ್ರಚಾರಕ್ಕೆ ತಗಲುವ ಖರ್ಚನ್ನು ಹೊರುವ ಸಾಮರ್ಥ್ಯವಿರುವುದಿಲ್ಲ. ಅಖಿಲ ಭಾರತ ಮಾರಾಟ ಸಹಕಾರಿ ಸಂಘವೂ ಪ್ರಚಾರಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಂತೆ ಕಂಡುಬರುವದಿಲ್ಲ. ಅದರಂತೆ ಸರಕಾರ ಈ ವಿಷಯದ ಕಡೆಗೆ ಗಮನಹರಿಸಿದ್ದರೂ ಆದ ಕಾರ್ಯ ಮಾತ್ರ ಅಲ್ಪ. ದೇಶ ವಿದೇಶಗಳಲ್ಲಿ ಆಕರ್ಷಣೀಯ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿ ಯಾಗಿ ನೆರವೇರಿಸಿದರೆ ಕೈಮಗ್ಗದ ಮಾರಾಟ ಹೆಚ್ಚಬಹುದು.

೮. ವ್ಯಕ್ತಿ ಮತ್ತು ಸಾಮಾಜಿಕ ಮನೋಭಾವನೆ:

ಪ್ರಾಮಾಣಿಕತೆ, ದಕ್ಷತೆ, ಶ್ರಮಜೀವನ, ಉದಾತ್ತ ಮಹತ್ವಾಕಾಂಕ್ಷೆ, ಸೇವಾಭಾವ, ಮುನ್ನುಗ್ಗುವ ಪ್ರವೃತ್ತಿ, ಮುಂಧೋರಣೆ, ನಿಯಮಿತತನ, ಇವೇ ಮೊದಲಾದ ಶ್ರೇಷ್ಠ ಗುಣಗಳ ಸರ್ವಸಾಮಾನ್ಯ ಕೊರತೆಯನ್ನು ನೇಕಾರರಲ್ಲಿ

ಕಾಣಬಹುದಾಗಿದೆ. ಅಪ್ರಾಮಾಣಿಕ ಮತ್ತು ಅದಕ್ಷ ಆಡಳಿತ ರಂಗವೂ ನಿರ್ಮಾಣವಾಗಿದೆ. ಯಾವುದಾದರೊಂದು ಕಾರ್ಯಕ್ರಮದ ಯಶ ಇಲ್ಲವೆ ಉದ್ದಿಮೆಯ ಅಭಿವೃದ್ಧಿ ಕೇವಲ ಆರ್ಥಿಕಾಂಶಗಳನ್ನಷ್ಟೇ ಅವಲಂಬಿಸಿರುವುದಿಲ್ಲ. ಅದು ವೈಯಕ್ತಿಕ ಮತ್ತು ಸಾಮಾಜಿಕ ಅಂಶಗಳನ್ನೂ ಅವಲಂಬಿಸಿರುತ್ತದೆ. ಈ ಉದ್ದಿಮೆಯಲ್ಲಿ ಇಂದಿಗೂ ನಿರೀಕ್ಷಿಸಿದ ಅಭಿವೃದ್ಧಿಯಾಗದಿದ್ದುದಕ್ಕೆ ಬಹುತರವಾಗಿ ವೈಯಕ್ತಿಕ ಹಾಗೂ ಸಾಮಾಜಿಕ ಅಂಶಗಳೇ ಮೂಲಕಾರಣವೆಂಬುದನ್ನು ಮರೆಯಲಾಗದು. ಸರ್ಕಾರಿ ಆಡಳಿತ ಯಂತ್ರದ ಹಾಗೂ ನೇಕಾರರ ಮನೋಭಾವನೆಯಲ್ಲಿ ಅಭಿವೃದ್ಧಿಗೆ ಸಹಾಯಕವಾಗುವ ತೀವ್ರ ಬದಲಾವಣೆಯಾಗದೆ ಎಷ್ಟೇ ಅಭಿವೃದ್ಧಿ ಕ್ರಮಗಳನ್ನು ಹಮ್ಮಿಕೊಳ್ಳಲಿ, ಎಷ್ಟು ಹಣವನ್ನಾದರೂ ಖರ್ಚುಮಾಡಲಿ ಹಾಗೂ ಯಾವ ಧೋರಣೆಯನ್ನೇ ಅನುಸರಿಸಲಿ, ಅವುಗಳಿಂದ ನಿರೀಕ್ಷಿಸಿದ ಫಲ ದೊರೆಯಲು ಸಾಧ್ಯವಿಲ್ಲವೆಂಬುದು ಇಷ್ಟು ದಿನಗಳ ಅನುಭವದಿಂದ ವೇದ್ಯವಾಗುತ್ತದೆ.

೯. ಬಣ್ಣದ ಬಟ್ಟೆಗಳನ್ನು ಕೈಮಗ್ಗದ ರಂಗಕ್ಕೇನೇ ಮೀಸಲಾಗಿರಿಸುವ ಪ್ರಶ್ನೆ ಇಂದು ಬಹಳ ಮಹತ್ವವನ್ನು ಪಡೆದಿದೆ. ಈ ಪ್ರಶ್ನೆಯನ್ನು ಪರಿಶೀಲಿಸಲು ನೇಮಿಸಿದ ಎಲ್ಲ ತಜ್ಞರ (ಸರ್ವಶ್ರೀ ಕುನುಂಗೊ ಮೊದಲಾದ ಸಮಿತಿಗಳು) ಸಮಿತಿಗಳು ಬಣ್ಣದ ಬಟ್ಟೆಯನ್ನು ಕೈಮಗ್ಗದ ಕ್ಷೇತ್ರಕ್ಕೆ ಮೀಸಲಾಗಿರಿಸಬೇಕೆಂದು ಹಾಗೂ ಪಾವರಲೂಮ ರಂಗದಲ್ಲಿ ಇದನ್ನು ಪ್ರತಿಬಂಧಿಸಬೇಕೆಂದು ಸರಕಾರಕ್ಕೆ

ಶಿಫಾರಸ್ ಮಾಡಿರುತ್ತಾನೆ. ಆದರೆ ಈ ಸಂಬಂಧದಲ್ಲಿ ಆಜ್ಞೆಯನ್ನು ಹೊರಡಿಸುವಾಗ ಪಾವರಲೂಮು ರಂಗಕ್ಕೆ. ಬಣ್ಣದ ಬಟ್ಟೆಗಳನ್ನು ಬಿಟ್ಟು ಬಿಳಿ ಬಟ್ಟೆಯನ್ನು ನೇಯಲಿಕ್ಕೆ ಬೇಕಾಗುವ ಎಲ್ಲ ಅನುಕೂಲತೆಗಳನ್ನು ನೊದಲು ಒದಗಿಸಬೇಕೆಂದು ಶ್ರೀ ಅಶೋಕ ಮೆಹತಾ ಸಮಿತಿ ಸೂಚಿಸಿತ್ತು. ಆದರೆ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಈ ಸೂಚನೆಯನ್ನು ಗಮನಿಸದೆ ಯಾವ ಅನುಕೂಲತೆಗಳನ್ನು ಪಾವರಲೂಮು ಕ್ಷೇತ್ರಕ್ಕೊದಗಿಸದೆ. ಅವುಗಳನ್ನು ಬಣ್ಣದ ಬಟ್ಟೆಯನ್ನು ನೇಯ್ಯದಂತೆ ಪ್ರತಿಬಂಧಿಸಲುದ್ಯುಕ್ತವಾಗಿರುವುದು ವಿಷಾದನೀಯ.

**ಪರಿಹಾರ ಸೂಚನೆಗಳು**

ಸರ್ವಸಾಮಾನ್ಯವಾಗಿ ಎಲ್ಲ ಯೋಜನೆಗಳಲ್ಲಿ ಹಾಗೂ ತಜ್ಞರ ವರದಿಗಳಲ್ಲಿ ಸಹಕಾರಿ ವ್ಯವಸ್ಥೆಯನ್ನ ಕೈಮಗ್ಗದ ಉದ್ದಿಮೆಯಲ್ಲಿ ವಿಸ್ತರಿಸಿ. ಈ ಉದ್ದಿಮೆಯ ಜ್ವಲಂತ ಸಂಘಟನಾ ಸಮಸ್ಯೆಯನ್ನು ಪರಿಹರಿಸಲು ಸೂಚಿಸಲಾಗಿದೆ. ಆದರೆ ಕಳೆದ ೬ ದಶಕಗಳ ಈ ಸಂಬಂಧದಲ್ಲಿಯ ಅನುಭವದಿಂದ ಸಹಕಾರಿ ಸಂಘಗಳನ್ನಷ್ಟೇ ಅವಲಂಬಿಸಿ ಈ ಉದ್ದಿಮೆಯಲ್ಲಿಯ ಸಂಘಟನಾ ಸಮಸ್ಯೆಯನ್ನು ನಿವಾರಿಸಲು ಸಾಧ್ಯವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಬದಲಿ ವ್ಯವಸ್ಥೆಯ ವಿಚಾರಮಾಡುವುದು ತುಂಬ ಸಮಯೋಚಿತವಾಗಿದೆ. ಬಹು ಸಂಖ್ಯೆ ಕೈಮಗ್ಗಗಳಿರುವ ಪ್ರತಿ ಜಿಲ್ಲೆ

ಗೊಂಡು ಕೈಮಗ್ಗದ ಕಾರ್ಪೊರೇಶನ್ನನ್ನು ಸ್ಥಾಪಿಸಬೇಕು. ಸಂಯುಕ್ತವಾಣಿಜ್ಯ ಉದ್ದಿಮೆಯ ತತ್ವವನ್ನಾಧರಿಸಿ ಇದನ್ನು ಕಾರ್ಯಗತ ಮಾಡಬೇಕು. ಇದಕ್ಕೆ ಬೇಕಾಗುವ ಬಂಡವಾಳವನ್ನು ಸರಕಾರ, ಜಿಲ್ಲೆಯ ಸಹಕಾರಿ ಸಂಘಗಳ ಹಾಗೂ ಸಾಹುಕಾರ ವ್ಯಾಪಾರಿಗಳಿಂದ ಸಂಗ್ರಹಿಸಬೇಕು. ಇದರ ಬಂಡವಾಳದಲ್ಲಿ ಸರಕಾರದ ಪಾಲು ಹೆಚ್ಚಿನದಾಗಿರಬೇಕು. ಜಿಲ್ಲೆಯಲ್ಲಿಯ ಹಾಗು ಜಿಲ್ಲೆಗಳ ಕೈಮಗ್ಗದ ಉದ್ದಿಮೆಯಲ್ಲಿ ವ್ಯವಸ್ಥಿತಿ, ಉತ್ಪಾದನೆ ಮತ್ತು ಕೈಮಗ್ಗದ ಬಟ್ಟೆಯ ಮಾರಾಟ ಇದರ ಮುಖ್ಯ ಕಾರ್ಯಗಳು. ಇದು ಜಿಲ್ಲೆಯ ಕೈಮಗ್ಗದ ಎಲ್ಲ ಕೇಂದ್ರಗಳಿಗೆ ನೂಲು, ಬಣ್ಣ ಮೊದಲಾದ ಕಚ್ಚಾವಸ್ತುಗಳನ್ನು ಸಹಕಾರಿ ಸಂಘಗಳ ಇಲ್ಲವೆ ಸಾಹುಕಾರ ವ್ಯಾಪಾರಿ ವ್ಯವಸ್ಥೆಯ ಮುಖಾಂತರ ಪೂರೈಸಿ, ತನಗೆ ಬೇಕಾದ ನಮೂನೆಯ ಉತ್ಪಾದನೆಯನ್ನು ಮಾಡಬೇಕು. ಹೀಗೆ ಉತ್ಪಾದಿಸಿದ ಮಾಲನ್ನು ತಾನೇ ಕೊಂಡು ತನ್ನ ಮಾರಾಟದ ಅಂಗಡಿಗಳಲ್ಲಿ ಮಾರಬೇಕು. ಇದು ಕೇವಲ ಆದರ್ಶಗಳ ತಳಹದಿಯ ಮೇಲೆ ಕಾರ್ಯಮಾಡದೆ ವ್ಯಾವಹಾರಿಕ ದೃಷ್ಟಿಯನ್ನು ಗಣನೆಗೆ ತೆಗೆದುಕೊಂಡು ಕಾರ್ಯೋನ್ಮುಖವಾಗಬೇಕಾಗಿರುವುದು ಆರ್ಥಿಕ ಹಾಗೂ ಸಾಮಾಜಿಕ ದೃಷ್ಟಿಯಿಂದ ಸಮರ್ಥನೀಯ. ಸರಕಾರ ತನ್ನ ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳನ್ನು ಈ ಸಂಸ್ಥೆಯ ಮೂಲಕವೇ ಕಾರ್ಯಗತಗೊಳಿಸಬೇಕು. ಈ ಸಂಸ್ಥೆಯೂ ತನ್ನದೆ ಆದ ಅಭಿವೃದ್ಧಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕು.

ಇಂತಹ ಹೊಸ ಸಂಸ್ಥೆಯ ಬಗೆಗೆ ವಿಚಾರಿಸಿ, ಅದನ್ನು ಕಾರ್ಯರೂಪಕ್ಕೆ ತರುವುದಕ್ಕೆ ಸಮಯ ಬೇಕಾಗುವುದು ಸಹಜ. ಆದ್ದರಿಂದ ಉದ್ದಿಮೆಯ ಸಮಸ್ಯೆಯ ತುರ್ತು ಪರಿಹಾರಕ್ಕಾಗಿ ಕೆಲವು ಉಪಾಯಗಳನ್ನು ಇಲ್ಲಿ ಸೂಚಿಸ ಲಾಗಿದೆ.

ಸಹಕಾರಿ ಸಂಘಗಳು ತಮ್ಮ ನೇಕಾರ ಸದಸ್ಯರನ್ನು ಬೇರೆ ವ್ಯವಸ್ಥೆಯಲ್ಲಿ ಸೇರಿಕೊಳ್ಳದಂತೆ ಮಾಡಲು ತಮ್ಮ ಬಾಯ-ಲಾಗಳಲ್ಲಿ ಸೂಕ್ತ ಬದಲಾವಣೆಯನ್ನು ಮಾಡಬೇಕು. ಸದ್ಯ ಕೇವಲ ಅಲ್ಪಾವಧಿ ಸಾಲವನ್ನು ಉತ್ಪಾದನೆಯ ಸಲು ವಾಗಿ ಮಾತ್ರ ನೇಕಾರ-ಸದಸ್ಯರಿಗೆ ಸಹಕಾರಿ ಸಂಘಗಳು ಕೊಡುತ್ತವೆ. ಆದರೆ ದೀರ್ಘಾವಧಿ ಸಾಲಗಳನ್ನು ಕೊಡ ಲಾಗುವುದಿಲ್ಲ. ಇದರಿಂದ ನೇಕಾರರು ಬೇರೆ ವ್ಯವಸ್ಥೆ ಯೊಂದಿಗೆ (ಸಾಹುಕಾರ ನೇಕಾರ) ಸಂಬಂಧ ಇರಿಸಿಕೊಳ್ಳು ತ್ತಾರೆ. ಆದ್ದರಿಂದ ಸಹಕಾರಿ ಸಂಘಗಳೂ ದೀರ್ಘಾವಧಿ ಸಾಲ ಸೌಲಭ್ಯಗಳನ್ನು ಕೊಡುವ ಸಾಮರ್ಥ್ಯಹೊಂದಲು ಅವುಗಳಿಗೆ ಸರಕಾರ ಹಾಗೂ ರಾಷ್ಟ್ರೀಕೃತ ಹಣಕಾಸಿನ ಸಂಸ್ಥೆ ಗಳು ಸಹಾಯಮಾಡಬೇಕು.

ಚರಬಂಡವಾಳವನ್ನೊದಗಿಸುವ ವ್ಯವಸ್ಥೆಯನ್ನು ರಿಝರ್ವ ಬ್ಯಾಂಕಿನ ಮೂಲಕ ಮಾಡಿತ್ತಾದರೂ ಸದ್ಯದ ಪರಿಸ್ಥಿತಿಯಲ್ಲಿ ಆ ಬಂಡವಾಳ ಸಾಲದು. ಪ್ರತಿಮಗ್ಗಕ್ಕೆ ಕೊಡಮಾಡುವ ಸಾಲದ ಮೊತ್ತವನ್ನು ಏರಿಸಬೇಕು.

ಮಾರಾಟದ ಉದ್ದೇಶಕ್ಕಾಗಿ ಕೊಡಮಾಡುವ ಸಾಲದ ಪ್ರಮಾಣವನ್ನು ಹೆಚ್ಚಿಸಬೇಕು.

ಹಣಕಾಸಿನ ಸಂಸ್ಥೆಗಳು ಹಾಗೂ ಸರಕಾರ ಕೊಡಮಾಡುವ ಸಾಲಸೌಲಭ್ಯಗಳು ಕೇವಲ ನೇಕಾರರ ಸಂಘಕ್ಕಷ್ಟೆ ಸೀಮಿತವಾಗಿರಬಾರದು. ಇನ್ನುಳಿದ ವ್ಯವಸ್ಥೆಯಲ್ಲಿಯ ಮಗ್ಗಗಳಿಗೂ ಸಾಲಸೌಲಭ್ಯಗಳು ದೊರಕುವಂತೆ ಮಾಡಲೇಬೇಕು. ಏಕೆಂದರೆ ಬಹುಸಂಖ್ಯೆ ಮಗ್ಗಗಳು ಸಹಕಾರಿ ಕ್ಷೇತ್ರದಿಂದ ಹೊರಗೆ ಇರುತ್ತವೆ.

ಮಿಲ್ಲಿನಿಂದ ಇಲ್ಲವೆ ಸಹಕಾರಿ ಗಿರಣಿಗಳಿಂದ ಸಹಕಾರಿ ಸಂಘಗಳ ಹಾಗೂ ಸಾಹುಕಾರಿ ಪದ್ಧತಿಗಳಿಂದ ಪೂರೈಸುವ ನೂಲು ಸಾಲುವದಿಲ್ಲ ಅಥವಾ ಇದು ಕಳ್ಳವ್ಯಾಪಾರಕ್ಕೆಡೆ ಮಾಡಿಕೊಡುತ್ತದೆ. ಆದ್ದರಿಂದ ದೊಡ್ಡ ದೊಡ್ಡ ಕೈಮಗ್ಗದ ಕೇಂದ್ರಗಳಲ್ಲಿ ಯೋಗ್ಯ ಬೆಲೆಯ ಅಂಗಡಿಗಳನ್ನು ತೆರೆಯಬೇಕು. ಈ ಅಂಗಡಿ ಕೇವಲ ನೂಲನ್ನಷ್ಟೆ ಮಾರದೆ ಉಳಿದ ಕಚ್ಚಾಮಾಲುಗಳನ್ನು ಮತ್ತು ಸುಧಾರಿಸಿದ ಸಲಕರಣೆಗಳನ್ನು ಮಾರಾಟಮಾಡಬೇಕು.

ಕೈಮಗ್ಗದ ವಸ್ತುಗಳ ಮಾರಾಟದ ಸಮಸ್ಯೆ ಸರ್ವಸಾಮಾನ್ಯವಾಗಿ ಈ ಉದ್ದಿಮೆಯ ಎಲ್ಲ ಘಟಕಗಳ ಸಮಸ್ಯೆಯಾಗಿದ್ದಾದರೂ ಸಹಕಾರಿ ಸಂಘಗಳ ಹಾಗೂ ಸ್ವತಂತ್ರ ನೇಕಾರರ ಮುಖ್ಯ ಸಮಸ್ಯೆಯಾಗಿದೆ. ಇದನ್ನು ಪರಿಹರಿಸಲು ಸರಕಾರ ಈ ಉದ್ದಿಮೆಯ ಬಟ್ಟೆಗಳನ್ನು ಕೊಂಡುಕೊಂಡು

ತನ್ನ ನೌಕರರಲ್ಲಿ ಹಂಚಬೇಕು. ಈ ಬಟ್ಟೆ ಮಾರಾಟವಾಗುವ ಮುಖ್ಯ ಕೇಂದ್ರಗಳಲ್ಲಿ ಮಾರಾಟದ ಮಳಿಗೆಗಳನ್ನು ತೆರೆಯಬೇಕು.

ಈಗಿದ್ದ ತರಬೇತಿ ಕೇಂದ್ರಗಳ ಮತ್ತು ಸಂಶೋಧನಾ ಕೇಂದ್ರಗಳ ಸಂಖ್ಯೆ ಕಡಿಮೆ ಮತ್ತು ಅವುಗಳ ಕಾರ್ಯ ತೃಪ್ತಿಕರವಾಗಿಲ್ಲವಾದ್ದರಿಂದ ಸೂಕ್ತ ಕ್ರಮಗಳನ್ನು ತೆಗೆದುಕೊಂಡು ಈ ಕೊರತೆಯನ್ನು ಸರಿಪಡಿಸಬೇಕು. ಮುಖ್ಯ ಕೈಮಗ್ಗದ ಕೇಂದ್ರಗಳಲ್ಲಿ ತರಬೇತಿ ಹಾಗೂ ಸಂಶೋಧನಾ ಕೇಂದ್ರಗಳನ್ನು ತೆಗೆಯಬೇಕು. ಇದ್ದ ಕೇಂದ್ರಗಳ ಚಟುವಟಿಕೆಗಳನ್ನು ಹೆಚ್ಚಿಸಬೇಕು. ಹಾಗೂ ಅವುಗಳ ಆಡಳಿತ ದಕ್ಷವಾಗುವಂತೆ ನೋಡಿಕೊಳ್ಳಬೇಕು. ಇವುಗಳಿಂದಾಗುವ ಲಾಭದ ಮಾಹಿತಿಯನ್ನು ನೇಕಾರರಿಗೆ ತಿಳಿಯುವ ವ್ಯವಸ್ಥೆಯೂ ಆಗಬೇಕು. ತರಬೇತಿ ಹೊಂದಿದ ನೇಕಾರನಿಗೆ ಸುಧಾರಿಸಿದ ಪದ್ಧತಿಯನ್ನು ಅನುಸರಿಸಿಕೊಂಡು ಹೋಗಲು ಬೇಕಾಗುವ ಅನುಕೂಲತೆಗಳೂ ನಿರ್ಮಾಣವಾಗಬೇಕು. ಹೊಸ ಹೊಸ ನಮೂನೆಗಳ ಬಟ್ಟೆಗಳ ಉತ್ಪಾದನೆಗೆ ಹಾಗೂ ಅವುಗಳ ಗುಣಮಟ್ಟವನ್ನು ಹೆಚ್ಚಿಸುವುದಕ್ಕೆ ಈ ಕೇಂದ್ರಗಳು ತುಂಬ ಶ್ರಮಿಸಬೇಕು. ನೇಕಾರನ ಮನೋಭಾವನೆಯಲ್ಲಿಯೂ ಸೂಕ್ತ ಬದಲಾವಣೆಯಾಗುವುದು ಅವಶ್ಯವಿದೆ. ಇಂಥ ಬದಲಾವಣೆಗೆ ಕೈಮಗ್ಗದ ಕೇಂದ್ರಗಳಲ್ಲಿಯ ಮುಂದಾಳುಗಳು ಮತ್ತು ಸರಕಾರ ಪ್ರಯತ್ನಿಸಬೇಕು.

ಕೈಮಗ್ಗದ ಬಟ್ಟೆಗೆ ವಿದೇಶಿ ಮಾರುಕಟ್ಟೆಯಲ್ಲಿ ಸಾಕಷ್ಟು ಬೇಡಿಕೆ ಇರುವುದು ಇತ್ತೀಚಿಗೆ ಕಂಡುಬರುತ್ತಿದೆ. ಸರಕಾರದ ನಿಯಾರ್ತ ಸಂಸ್ಥೆಗಳು ಹಾಗೂ ಅಖಿಲಭಾರತ ಮಾರಾಟ ಸಹಕಾರಿ ಸಂಘ ವಿವಿಧ ಕೇಂದ್ರಗಳಲ್ಲಿ ತಯಾರಾದ ಬಟ್ಟೆಗಳನ್ನು ವಿದೇಶಗಳಲ್ಲಿ ಪ್ರಚಾರಮಾಡಿ ಮಾರಲು ಶ್ರಮಿಸುವದು ಅವಶ್ಯ. ಅಖಿಲಭಾರತ ಮಾರಾಟ ಸಹಕಾರಿ ಸಂಘ ಮುಖ್ಯ ಕೈಮಗ್ಗದ ಕೇಂದ್ರಗಳಲ್ಲೆಲ್ಲ ತನ್ನ ಶಾಖೆಯನ್ನು ತೆರೆದು ದೇಶವಿದೇಶಗಳಲ್ಲಿ ಕೈಮಗ್ಗದ ಬಟ್ಟೆಗಳ ಮಾರಾಟ ಹೆಚ್ಚುವಂತೆ ಪ್ರಯತ್ನಿಸಬೇಕು.

ಕೈಮಗ್ಗದ ಕೇಂದ್ರಗಳಲ್ಲಿ ಬಣ್ಣದ ಸೀರೆಗಳನ್ನು ಉತ್ಪಾದಿಸುತ್ತಿರುವ ಪಾವರ ಮಗ್ಗಗಳನ್ನು ಸೀರೆಗಳನ್ನು ನೆಯ್ಯದಂತೆ ನಿರ್ಬಂಧಿಸಬೇಕು. ಆದರೆ ಈ ನಿರ್ಬಂಧದ ಆಜ್ಞೆಯನ್ನು ಜಾರಿಗೆ ತರುವ ಮುನ್ನ ಪಾವರ ಮಗ್ಗಗಳ ಕ್ಷೇತ್ರ ಬಿಳಿಬಟ್ಟೆಗಳನ್ನು ನೆಯ್ಯುವುದಕ್ಕೆ ಬೇಕಾಗುವ ಎಲ್ಲ ಪೂರ್ವಭಾವಿ ಅನುಕೂಲತೆಗಳನ್ನು ಒದಗಿಸಬೇಕು. ಉದಾಹರಣೆಗೆ ಬಿಳಿಬಟ್ಟೆಯನ್ನು ನೆಯ್ಯಲು ಬೇಕಾಗುವ ಸಾಯಿಜಿಂಗ, ಕ್ಯಾಲಂಡರಿಂಗ, ಬ್ಲೀಚಿಂಗ, ಫಿನಿಷಿಂಗ ಮೊದಲಾದ ಪೂರ್ವಭಾವಿ ಅನುಕೂಲತೆಗಳು ಆಯಾ ಕೇಂದ್ರಗಳಲ್ಲಿಯೇ ಸಿಗುವಂತಹ ವ್ಯವಸ್ಥೆಯಾಗಬೇಕು. ಇವುಗಳನ್ನು ನಿರ್ಮಾಣಮಾಡದೆ ನೇರವಾಗಿ ಅವುಗಳು ಸೀರೆ ನೆಯ್ಯುವುದನ್ನು ಪ್ರತಿಬಂಧಿಸಿದರೆ, ಈ ರಂಗದಲ್ಲಿದ್ದ ಕೂಲಿಕಾರರ ಘೋರ ವಿರೋಧವನ್ನೂ ಇಲ್ಲವೆ ನಿರುದ್ಯೋಗದ ತೀವ್ರ ಸಮಸ್ಯೆಯನ್ನೆದುರಿಸಬೇಕಾಗುತ್ತದೆ.

ನೌಕರರ ಮತ್ತು ಆಡಳಿತ ಯಂತ್ರದ ಮನೋಭಾವನೆಯಲ್ಲಿ ಸೂಕ್ತ ಬದಲಾವಣೆಯನ್ನು ತರುವುದು ಅಭಿವೃದ್ಧಿ ಯೋಜನೆಯ ಯಶಸ್ಸಿಗೆ ಅತ್ಯಾವಶ್ಯವಿದ್ದುದರಿಂದ ಸರಕಾರ ಹಾಗೂ ಸಮಾಜದ ಮುಂದಾಳುಗಳು ಈ ದಿಶೆಯಲ್ಲಿ ಪ್ರಯತ್ನಿಸಬೇಕು. ಸರಿಯಾದ ಶಿಕ್ಷಣ ಪ್ರಸಾರಮಾಡಿ ತರಬೇತಿ ಕೊಟ್ಟು, ಪ್ರಭಾವಿ ಮುಂದಾಳುಗಳನ್ನು ಪ್ರೋತ್ಸಾಹಿಸಿ, ಅಭಿವೃದ್ಧಿ ಹೊಂದಿದ ದೇಶಗಳ ಆದರ್ಶಗಳನ್ನು ಪ್ರಸಾರ ಮಾಡಿ, ಆಡಳಿತ ವರ್ಗದಲ್ಲಿಯ ವ್ಯಕ್ತಿಗಳ ದಕ್ಷತೆಗೆ ಹಾಗೂ ಪ್ರಾಮಾಣಿಕತೆಗೆ ಮನ್ನಣೆಕೊಟ್ಟು, ಅವುಗಳ ಆಧಾರದ ಮೇಲಿಂದಲೇ ಬಡತಿಯನ್ನು ಕೊಟ್ಟು, ಲಂಚಬಡಕ ಅಧಿಕಾರಿಗಳ ಹೆಸರನ್ನು ಕಪ್ಪುಪಟ್ಟಿಯಲ್ಲಿಟ್ಟು ಅವರನ್ನು ಅಧಿಕಾರದಿಂದ ಕಡಿಮೆಮಾಡಿಯೋ ಇಲ್ಲವೆ ಅವರನ್ನು ಬಡತಿಗೆ ಅನರ್ಹರನ್ನಾಗಿ ಮಾಡುವಂಥ ಮೊದಲಾದ ಕ್ರಮಗಳನ್ನು ಕೈಕೊಂಡು ನೌಕರರಲ್ಲಿ ಮತ್ತು ಆಡಳಿತ ವರ್ಗದಲ್ಲಿದ್ದ ಜನರಲ್ಲಿ ಅಭಿವೃದ್ಧಿಗೆ ಅನುಕೂಲವಾಗುವ ಮನೋವೃತ್ತಿಯನ್ನು ನಿರ್ಮಾಣ ಮಾಡಬೇಕು.

---

# ಗ್ರಂಥಋಣ

Books :

1 Richard B. Gregg– Economics of Khaddar, Ahmedabad 1946

2 Basu S. K.–Place & Problems of small Industries, Calcutta, 1957

3 Kakade R. G.– Socio–Economic Survey of Weaving Communities in Sholapur, Poona 1946

4 Hagen E. E.– In theory of Social change how Economic Growth Begins, 1962

5 The Japanese National Commission for UNESCO Technological development in Japan A case study UNESCOParis 1971

6 Kedarnath Prasad– Technological choice under developmental planning, Bombay 1963

7 P. N. Dhar:–Small–Scale Industries in Delhi, 1956

8 A. K. Sen– Choice of Techniques An Aspect of Planned Economic Development, oxford 1960

9 R. V. Rao- Cottage and small–scale Industries and planned Economy

**Surveys:**

10 NCAER- A survey of Handloom Industry in four district of Karnatak, Sholapur 1958

11 Balkrishna- A survey of Handloom Industry in Madras State. All India Handloom Board, 1959

12 NCAER- Survey of Silk & Art-silk Industry New Delhi 1961

**Reports:**

13 R. B. I. Review of Co-operative Movement in India 1956-58 Bombay 1960

14 R. B. I. Statistical Statement-Co-operative movement in India 1967-68 & 1969

15 Govt. of India P. C. Programme Evaluation organisation Study of Handloom Development programme, 1967

16 Govt. of India Reprt of the Village & Small-Scale Industries (Second Five Year Plan)

17 Govt. of India Report of Textile Enquiry Committee, 1954

18 Govt. of India Report of Powerloom Enquiry Committee, 1964

19 Govt of India Report of Village & small Industries (Fourth Plan) Committee, 1968

Articles:

20 S. A. Kuz, Min-Problems of Economics. The Developing Countries, Employment & Capital Investment. Feb.-March; 1969 Vol. XI. No. 10-11

21 K.N. Raj "Small-scale Industries, problems of Technological changes" The Economic weekly April, 1956

22 L. K. Mitra-"Role of village & small Industries" Khadi Gramodyog ann. 3. 1962

23 T.N. Singh–Future growth small Industries" Khadi Gramodyog, 1962

24 S L. Narayan- Problems of small-scale Industries, Economic Times 24 th Feb., 1971

25 Netherlands Economic Institute Publication: "The Economics of Mill versus Handloom weaving in India" Rotterdum 1956

———

# ಉಪನ್ಯಾಸ ಗ್ರಂಥಮಾಲೆ

## ಇತ್ತೀಚಿನ ಪ್ರಕಟನೆಗಳು

ಹರಿಹರನ ಮೂರು ರಗಳೆಗಳು

—ಎಂ. ಎಸ್. ಲಕ್ಷ್ಮೀ

ಪ್ರಾಚ್ಯವಸ್ತು ಸಂಶೋಧನೆ

—ಅ. ಸುಂದರ

ನವೋದಿತ ಬಂಗ್ಲಾದೇಶ

—ಎ. ಎಂ. ರಾಜಶೇಖರಯ್ಯ

ಕನ್ನಡದಲ್ಲಿ ಶತಕಸಾಹಿತ್ಯ

—ಬಿ. ವಿ. ಗುಂಜೆಟ್ಟಿ

ಕನ್ನಡದಲ್ಲಿ ಲಲಿತಪ್ರಬಂಧಗಳು

—ವಿ. ಎನ್. ಸಿಂಪಿ

ಇಕ್ಕೇರಿ ಅರಸರು

—ಕೆ. ಗುಂಡಾಜೋಯಿಸ್

ಟೀಕಾಚಾರ್ಯರು

—ಪಿ. ಎಂ. ಗಲಗಲಿ

ಭೂಕಂಪಗಳು ಹಾಗೂ ಜ್ವಾಲಾಮುಖಿಗಳು

—ಎಂ. ಎಫ್. ಕರೆಣ್ಣವರ

ಭಾರತದಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳು

—ಟಿ. ಎಂ. ಪಂಡಿತ

ರವೀಂದ್ರರ ಶೈಕ್ಷಣಿಕ ತತ್ವಜ್ಞಾನ

—ಅನಂತ ಕುಲಕರ್ಣಿ

ಷೇಕ್ಸಪಿಯರನ ನಾಟಕಗಳಲ್ಲಿ ಸಾಮಾಜಿಕ ಪ್ರಜ್ಞೆ

—ವಿ. ಕೆ. ನವಲಗುಂದ

ನಾರುಹುಣ್ಣು

—ಎಸ್. ಎಸ್. ನರಸಣಗಿ

ಗುಹ್ಯರೋಗಗಳು

—ಸ. ಜ. ನಾಗಲೋಟಿಮಠ

---

ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩